ಒಳಪಡಿಸಲಾಗಿದೆ. ಈ ಪ್ರಕರಣವನ್ನು ಆಡಿಟ್ ಆಕ್ಷೇಪಣೆ ಎಂದು ಪರಿಗಣಿಸಿ ತಮ್ಮಗಳನ್ನು ಆರೋಪ ಮುಕ್ತರನ್ನಾಗಿಸುವಂತೆ ಕೋರಿದ್ದಾರೆ. ಇಬ್ಬರೂ ಅಧಿಕಾರಿಗಳ ಉತ್ತರದಿಂದಾಗಿ ಪ್ರಕರಣವನ್ನು ಮತ್ತೆ ಪರಿಶೀಲಿಸಲಾಗಿದೆ. ಇಬ್ಬರೂ ತಮ್ಮ ಉತ್ತರಗಳಲ್ಲಿ ಸಾಮಾನ್ಯವಾಗಿ ಪ್ರಸ್ತಾಪಿಸಿರುವ ಅಂಶವೆಂದರೆ ಪ್ರಕರಣದ ಮೂಲ ರೂವಾರಿ ಹಾಗೂ ಡೂಪ್ಲಿಕೇಟ್ ಪ್ರತಿಗಳನ್ನು ಸೃಷ್ಟಿಸಿದ ಅಂದಿನ ಸೂಪರಿಂಟೆಂಡೆಂಟ್ ಹಾಗೂ ವಿಷಯ ನಿರ್ವಾಹಕ ಎ.ಎನ್. ರಾಮರೆಡ್ಡಿ ಅವರನ್ನು ಹಾಗೆಯೇ ಬಿಲ್ ಪಾವತಿಗೆ ಮೇಲು ರುಜು ಮಾಡಿದ ಉಪ ಕಾರ್ಯದರ್ಶಿ, ಅನುಮೋದನೆ ನೀಡಿದ ಮುಖ್ಯ ಕಾರ್ಯನಿರ್ವಹಣಾಧಿಕಾರಿಯವರೂ ಜವಾಬ್ದಾರರಾಗಿರುತ್ತಾರೆ. ಅವರೆಲ್ಲರನ್ನೂ ಬಿಟ್ಟು ತಮ್ಮ ವಿರುದ್ಧ ಮಾತ್ರ ವಿಚಾರಣೆ ನಡೆಸುತ್ತಿರುವುದರ ಔಚಿತ್ಯ ಎ.ಎನ್. ರಾಮರೆಡ್ಡಿ, ವ್ಯವಸ್ಥಾಪಕರು ಜಿಲ್ಲಾ ಪಂಚಾಯಿತಿ ನೌಕರರಾಗಿದ್ದು ಅವರ ವಿರುದ್ಧ ಚಿತ್ರದುರ್ಗ ಜಿಲ್ಲಾ ಪಂಚಾಯತ್ ವತಿಯಿಂದಲೇ ಪ್ರತ್ಯೇಕ ಶಿಸ್ತು ಕ್ರಮ ಜರುಗಿಸಲ್ಪಟ್ಟಿದೆ. ಮುಖ್ಯ ಕಾರ್ಯನಿರ್ವಹಣಾಧಿಕಾರಿ ಹಾಗೂ ಉಪಕಾರ್ಯದರ್ಶಿಯವರ ಪಾತ್ರ ಕುರಿತು ಪಿ. ಚಂದ್ರಪ್ಪ, ಅವರು ವಿಚಾರಣೆ ಸಮಯದಲ್ಲಿ ಮುಖ್ಯ ಕಾರ್ಯದರ್ಶಿಯವರ ಅನುಮೋದನೆ ಪಡೆದು ರಾಮರೆಡ್ಡಿಯವರು ಬಿಲ್ ತಯಾರಿಸಿ ಉಪಕಾರ್ಯದರ್ಶಿಯವರ ಮೇಲು ರುಜು ಪಡೆದು ಹಣ ಪಾವತಿಸಿರುತ್ತಾರೆಂದು ಹೇಳಿರುವುದನ್ನು ಬಿಟ್ಟರೆ ಬೇರೆಲ್ಲೂ ಈ ಬಗ್ಗೆ ಪ್ರಸ್ತಾಪ ಇಲ್ಲ.

ವಿಚಾರಣೆಯೂ ಸಹ ಇಬ್ಬರು ಆರೋಪಿಗಳು ಈಗಾಗಲೇ ಪಾವತಿ ಮಾಡಲ್ಪಟ್ಟ ಬಿಲ್‌ಗಳಿಗೂ ನಕಲೀ ಬಿಲ್ ಆಧಾರದ ಮೇಲೆ ಮತ್ತೊಮ್ಮೆ ಹಣ ಪಾವತಿ ಮಾಡಿದ ವಿಷಯ ಕುರಿತೇ ನಡೆದಿದೆ. ಗುರುತಿಸಲ್ಪಟ್ಟ ದಾಖಲೆಗಳಲ್ಲಿದ್ದ ಹಾಗೂ ಸಾಕ್ಷ್ಯಗಳ ಹೇಳಿಕೆಯಿಂದ ಶ್ರೀ ಅಹಮದ್ ಹಸನ್ ಹಾಗೂ ಶ್ರೀ ಪಿ. ಚಂದ್ರಪ್ಪ, ಹಿಂದಿನ ಸಹಾಯಕ ಕಾರ್ಯದರ್ಶಿಗಳು ಓಚರ್ ಎಂಬ ಪ್ರೊಫಾರ್ಮ್ ಇನ್‌ವಾಯ್ಸ್, ಇಂಕ್‌ನಲ್ಲಿ ದಿನಾಂಕ ನಮೂದಿಸಲ್ಪಟ್ಟ ಕಾರ್ಬನ್ ಪ್ರತಿ, ಡಿಮ್ಯಾಂಡ್ ನೋಟ್ ಪ್ರತಿ ಆಧಾರದ ಮೇಲೆ ಹಣ ಡ್ರಾ ಮಾಡಿರುವುದು, ಒಂದೇ ದಾಸ್ತಾನು ಪಟ್ಟಿಗೆ ಇಬ್ಬರೂ ಸಹಿ ಹಾಕಿರುವುದು ನಿಚ್ಚಳವಾಗಿ ಮೂಡಿ ಬಂದಿದೆ. ಶ್ರೀ ಪಿ. ಚಂದ್ರಪ್ಪ ಅವರು ತಮ್ಮ ಹೇಳಿಕೆಯಲ್ಲಿ ಎರಡೂ ಪ್ರತ್ಯೇಕ ಓಚರ್‌ಗಳಾಗಿರುವುದರಿಂದ ಎರಡು ಬಾರಿ ಹಣ ಪಾವತಿ ಮಾಡುವ ಪ್ರಶ್ನೆ ಉದ್ಭವಿಸುವುದಿಲ್ಲ ಎಂದು ತಿಳಿಸುತ್ತಾರೆ. ಆದರೆ ಎರಡನೇ ಬಾರಿ ಹಣ ಪಾವತಿ ಮಾಡಲ್ಪಟ್ಟ ಓಚರ್‌ಗಳು ಜೆರಾಕ್ಸ್ ಪ್ರತಿಗಳಾಗಿವೆ. ಆದ್ದರಿಂದ ಶ್ರೀ ಅಹಮದ್ ಹಸನ್, ಕೆಎಎಸ್ ಅಧಿಕಾರಿ ಹಾಗೂ ಶ್ರೀ ಪಿ. ಚಂದ್ರಪ್ಪ ಜಂಟಿ ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ಇಲಾಖೆ ಅವರುಗಳ ಉತ್ತರವನ್ನು ಒಪ್ಪದೆ ವಿಚಾರಣಾಧಿಕಾರಿಗಳ ವರದಿಯನ್ನು ಒಪ್ಪಿಕೊಂಡ ಸರ್ಕಾರವು ದಂಡನೆ ವಿಧಿಸಲು ನಿರ್ಧರಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 05 ಎಸ್‌ಇಎನ್ 95, ಬೆಂಗಳೂರು, ದಿನಾಂಕ: 12ನೇ ಆಗಸ್ಟ್ 2003**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ, ಸರ್ಕಾರವು ಪ್ರಕರಣದ ಆರೋಪಿಗಳಿಗೆ ಈ ಕೆಳಕಂಡ ದಂಡನೆಯನ್ನು ವಿಧಿಸುತ್ತದೆ.

ಅ) ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(ii) ಮತ್ತು 8(iv) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಅಹಮ್ಮದ್ ಹಸನ್, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಅವರಿಗೆ ವಾಗ್ದಂಡನೆ ವಿಧಿಸುತ್ತದೆ ಹಾಗೂ ಅವರ ದುರ್ನಡತೆಯಿಂದ ಸರ್ಕಾರಕ್ಕೆ ಉಂಟಾದ ರೂ.12,447-00 ನಷ್ಟವನ್ನು ಅವರಿಂದ 6 ಕಂತುಗಳಲ್ಲಿ ವಸೂಲಿ ಮಾಡಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಆ) ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(iii) ಮತ್ತು (iv) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಪಿ. ಚಂದ್ರಪ್ಪ, ಜಂಟಿ ನಿರ್ದೇಶಕರು ಆರ್ಥಿಕ ಮತ್ತು ಸಾಂಖ್ಯಿಕ ಇಲಾಖೆ ಅವರ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಬೀರದಂತೆ (without cumulative effect) ತಡೆಹಿಡಿಯಬೇಕೆಂದು ಹಾಗೂ ಅವರ ದುರ್ನಡತೆಯಿಂದ ಸರ್ಕಾರಕ್ಕೆ ಉಂಟಾದ ರೂ.37,851 ನಷ್ಟವನ್ನು 4 ಕಂತುಗಳಲ್ಲಿ ವಸೂಲು ಮಾಡಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 1061

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3).

## ಇಂಧನ ಸಚಿವಾಲಯ

**ವಿಷಯ:** ಮೆಸರ್ಸ್ ಪಲ್ಲವಿ ಗ್ರೀನ್ ಪವರ್ ಕಂಪೆನಿಗೆ, ಮೆಸರ್ಸ್ ಫೀಜಾ ಡೆವಲಪರ್ಸ್ ಅಂಡ್ ಇಂಟರ್ ಟ್ರೇಡ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಹಂಚಿಕೆ ಆಗಿರುವ 4.75 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಲ್ಲಿ 0.75 ಮೆಗಾವ್ಯಾಟ್ ಸಾಮರ್ಥ್ಯವನ್ನು ವರ್ಗಾವಣೆ ಮಾಡುವ ಬಗ್ಗೆ - ಆದೇಶ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಇಂಇ 4 ಎನ್‌ಸಿಇ 2002, ದಿನಾಂಕ: 31.5.2002.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ / 08 / ಪಿಜಿಪಿ / 2003 / 1189, ದಿನಾಂಕ: 6.8.2003.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆಸರ್ಸ್ ಫೀಜಾ ಡೆವಲಪರ್ಸ್ ಅಂಡ್ ಇಂಟರ್ ಟ್ರೇಡ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಚಿತ್ರದುರ್ಗ ಜಿಲ್ಲೆಯ ಕಂಚಿಗನಾಳ ಗ್ರಾಮದ ಮದಕರಿಪುರ ಗಾಳಿ ವಲಯದಲ್ಲಿ ಸರ್ವೆ ನಂ: 43, 44 ಮತ್ತು 35 ರಲ್ಲಿ 4.75 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ. ಅದರಲ್ಲಿ 0.75 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆಸರ್ಸ್ ಪಲ್ಲವಿ ಗ್ರೀನ್ ಪವರ್, ಪುಣೆ ಈ ಕಂಪನಿಗೆ ಅನುಷ್ಠಾನ ಮಾಡಲು

ವರ್ಗಾವಣೆ ಮಾಡುವಂತೆ ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರು ಶಿಫಾರಸ್ಸು ಮಾಡಿರುತ್ತಾರೆ. ಆದ್ದರಿಂದ, ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಂಇ 201 ಎನ್‌ಸಿಇ 2003, ಬೆಂಗಳೂರು, ದಿನಾಂಕ: 14ನೇ ಆಗಸ್ಟ್ 2003**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಲಾದ ಎಲ್ಲಾ ಅಂಶಗಳನ್ನು ಸರ್ಕಾರವು ಪರಿಶೀಲಿಸಿ ಮೆಸರ್ಸ್ ಫೀಜಾ ಡೆವಲಪರ್ಸ್ ಅಂಡ್ ಇಂಟರ್ ಟ್ರೇಡ್ ಪ್ರೈವೇಟ್ ಲಿಮಿಟೆಡ್ ಕಂಪೆನಿಗೆ ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಹಂಚಿಕೆ ಮಾಡಲಾದ 4.75 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಲ್ಲಿ 0.75 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮಾತ್ರ ಮೆಸರ್ಸ್ ಪಲ್ಲವಿ ಗ್ರೀನ್ ಪವರ್, ಪುಣೆ, ಈ ಕಂಪೆನಿಗೆ ಚಿತ್ರದುರ್ಗ ಜಿಲ್ಲೆ ಕಂಚಿಗನಾಳ ಗ್ರಾಮದಲ್ಲಿ ಅನುಷ್ಠಾನ ಮಾಡುವಂತೆ ವರ್ಗಾವಣೆ ಮಾಡಲು ಅನುಮತಿ ನೀಡಲಾಗಿದೆ.

ಮೇಲೆ (1) ರಲ್ಲಿ ಓದಲಾದ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತದೆ. ಮೆಸರ್ಸ್ ಪಲ್ಲವಿ ಗ್ರೀನ್ ಪವರ್ ಕಂಪೆನಿಯು ಹೊಸದಾಗಿ ಸರ್ಕಾರದೊಂದಿಗೆ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಲ್. ಜಯರಾಂ**

ಪಿ.ಆರ್. 1062 ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

## INFORMATION TECHNOLOGY & BIOTECHNOLOGY SECRETARIAT

**Sub:** Setting up of Software Technology Park in Bangalore by M/s Texas Instruments (India) Pvt. Ltd., - approval regarding.

**Read:** 1) Proceedings of the 92nd High Level Committee (HLC) Meeting held under the Chairmanship of the Hon'ble Chief Minister on 23.07.2003.

**PREAMBLE:**

M/s Texas Instruments (India) Pvt. Ltd. (TI) Bangalore is a 100% Export oriented unit, wholly owned subsidiary of M/s. Texas Instruments Inc. of USA, one of the world leader in programmable digital signal processing (DSP) and nalog Chip design. TI was the first MNC to set up a Software Development Centre in Bangalore in 1985 which catalysed the IT/Software Revolution in Bangalore. The product developed by the company is being utilised in digital signal processors and analog devices which in turn are being used in a wide range of applications inclding cell phones, automobiles washing machines etc.,

The company now proposes to shift its operations from the existing leased premises at Wind Tunnel Road, Murugeshpalya, Bangalore-17 to its own new campus on 7 acres of Industrially converted land to be purchased from M/s Bagemane Developers (P) Ltd. located at Byrasandra, C.V. Raman Nagar, Bangalore and expand its activities with an investment of Rs.144.40 crores. It is stated that the present Software Technology Park project would provide employment for 1200 persons.

The HLC in its meeting held on 23.07.2003 has approved the project and recommended certain infrastructure facilities, incentives and concessions.

Government have examined the recommendations of the HLC. Accordingly the following orders are issued.

**Government Order No. ITD 36 MDA 2003, Bangalore, Dated: 18th August 2003**

In the circumstances explained in the preamble Government are pleased to accord approval to M/s. Texas Instruments (India) Pvt. Ltd., Wind Tunnel Road, Murugeshpalya, Bangalore-17 for setting up of a Software Technology Park in Byrasandra, C.V. Raman Nagar, Bangalore and Shift the software development activities to the new campus and expand it with the following infrastructural facilities, incentives and concessions.

**INFRASTRUCTURE FACILITIES:**

**01. LAND:** The Project to be located at 7 acres of land identified at Byrasandra, C.V. Raman Nagar, Bangalore classified by the Mahanagara Palike.

**02. WATER:** BWSSB to consider supply of 90,000 liters of water per day

The company is advised to adopt the elements of the National Water Policy including water harvesting, recharging of ground water, complete recycling of water etc., The company is also advised to indicate their net requirement of water ofter taking to account the quantum of recycled water. The company will also clearly specify their requirements of treated water and fresh water to BWSSB.

**03. POWER:** BESCOM will consider supply of 3000 KVA of Power on a dedicated line from HAL substation.

**INCENTIVES & CONCESSIONS:**

Incentives and concessions are as per the Mahiti Millennium IT-Policy.

**POLLUTION CONTROL:**

The company will approach the Karnataka State Pollution Contral Board and Department of Ecology and Environment to obtain clearance as per the provisions of the relevant Act and Rules at the earliest.

**PROVIDING LOCAL EMPLOYMENT:**

The company will provide employment to local persons as per the policy of the Government.

By order and in the name of the Governor of Karnataka,

**K.M. ANANDA**

P.R. 1063

Under Secretary to Government,

Information Technology & Biotechnology Department.

**ಲೋಕೋಪಯೋಗಿ ಸಚಿವಾಲಯ**

**ವಿಷಯ:** ಶ್ರೀ ಬಿ.ಕೆ. ಸೈಯದ್, ಸಹಾಯಕ ಇಂಜಿನಿಯರ್ ಇವರ ಅನಧಿಕೃತ ಗೈರುಹಾಜರಿ ಬಗ್ಗೆ ಇಲಾಖಾ ವಿಚಾರಣೆ - ಅಂತಿಮ ಆದೇಶ.

**ಓದಲಾಗಿದೆ:**
1. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉ), ಧಾರವಾಡ ಇವರ ಪತ್ರ ಸಂಖ್ಯೆ: ಸಿಬಿಎಸ್:ಸಿ-5:ಇವಿ 34:98, ದಿನಾಂಕ: 16.12.1995.
2. ಸರ್ಕಾರದ ಆದೇಶ ಸಂಖ್ಯೆ: ಲೋಇ 5 ಸೇಇವಿ 2000, ದಿನಾಂಕ: 5.2.2000.
3. ಶ್ರೀ ಬಿ.ಕೆ. ಸೈಯದ್, ಸಹಾಯಕ ಇಂಜಿನಿಯರ್ ಇವರಿಗೆ ದೋಷಾರೋಪಣಾ ಪಟ್ಟಿಯೊಂದಿಗೆ ಹೊರಡಿಸಲಾದ ತಿಳುವಳಿಕೆ ಪತ್ರ ಸಂಖ್ಯೆ: ಲೋಇ 5 ಸೇಇವಿ 2000 ದಿನಾಂಕ: 3.3.2000.
4. ಸರ್ಕಾರದ ಆದೇಶ ಸಂಖ್ಯೆ: ಲೋಇ 5 ಸೇಇವಿ 2000, ದಿನಾಂಕ: 17.1.2003.
5. ಅಧೀಕ್ಷಕ ಇಂಜಿನಿಯರ್, ಲೋಇ ವೃತ್ತ, ಗುಲ್ಬರ್ಗಾ ಹಾಗೂ ವಿಚಾರಣಾಧಿಕಾರಿಗಳ ವರದಿ ದಿ: 16.5.2003.
6. ಶ್ರೀ ಬಿ.ಕೆ. ಸೈಯದ್, ಸಹಾಯಕ ಇಂಜಿನಿಯರ್ ಇವರಿಗೆ ಜಾರಿ ಮಾಡಲಾದ 2ನೇ ಕಾರಣ ಕೇಳುವ ನೋಟೀಸ್, ಸಂಖ್ಯೆ: ಲೋಇ 5 ಸೇಇವಿ 2000, ದಿನಾಂಕ: 20.5.2003.
7. ಅಧೀಕ್ಷಕ ಇಂಜಿನಿಯರ್, ಲೋಕೋಪಯೋಗಿ ವೃತ್ತ, ಗುಲ್ಬರ್ಗಾ ಇವರ ಪತ್ರ ಸಂಖ್ಯೆ: ಅಅಗು:ಸಿ-8: ಇಲಾಖಾ ವಿಚಾರಣೆ:2003-04 ದಿನಾಂಕ: 16.7.2003.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ: 1 ರಲ್ಲಿ ಓದಲಾದ ಪತ್ರದಲ್ಲಿ ಶ್ರೀ ಬಿ.ಕೆ. ಸೈಯದ್, ಸಹಾಯಕ ಇಂಜಿನಿಯರ್, ಲೋಕೋಪಯೋಗಿ, ಬೀದರ್ ಇವರು ದಿನಾಂಕ: 19.2.79 ರಿಂದ 20.3.79 ರವರೆಗೆ ಗಳಿಕೆ ರಜೆ ಅರ್ಜಿ ಸಲ್ಲಿಸಿ ನಂತರ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿದ್ದಾರೆಂದು ವರದಿ ಮಾಡಿದ್ದರ ಹಿನ್ನೆಲೆಯಲ್ಲಿ ಸರ್ಕಾರವು ಅವರನ್ನು ಮೇಲೆ ಕ್ರಮ ಸಂಖ್ಯೆ: 2 ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಸೇವೆಯಿಂದ ಅಮಾನತ್ತುಪಡಿಸಿರುತ್ತದೆ. ಶ್ರೀ ಬಿ.ಕೆ. ಸೈಯದ್, ಸಹಾಯಕ ಇಂಜಿನಿಯರ್ ಇವರ ಅನಧಿಕೃತ ಗೈರುಹಾಜರಿಯ ಬಗ್ಗೆ ಕರ್ನಾಟಕ ಸರ್ಕಾರಿ ಸೇವಾ (ವನಿಅ) ನಿಯಮಗಳು, 1957ರ ನಿಯಮ 11 ರಂತೆ ಇಲಾಖಾ ವಿಚಾರಣೆಯನ್ನು ನಡೆಸಲು ತೀರ್ಮಾನಿಸಿ ಅದರಂತೆ ದೋಷಾರೋಪಣಾ ಪಟ್ಟಿಯನ್ನು ದಿನಾಂಕ: 3.3.2000 ದಂದು ಜಾರಿ ಮಾಡಲಾಗಿತ್ತು. ಆದರೆ ಸದರಿ ದೋಷಾರೋಪಣಾ ಪಟ್ಟಿಗಳು ಜಾರಿಯಾಗದೇ ವಾಪಸ್ಸು ಬಂದ ಕಾರಣ ಅನಧಿಕೃತ ಗೈರುಹಾಜರಿಯ ಬಗ್ಗೆ ಸಂಯುಕ್ತ ಕರ್ನಾಟಕ ದಿನಪತ್ರಿಕೆಯಲ್ಲಿ ದಿನಾಂಕ: 26.6.2000 ದಂದು ಪ್ರಕಟಣೆ ನೀಡಲಾಗಿದೆ. ಜೊತೆಗೆ ಕರ್ನಾಟಕ ಸರ್ಕಾರಿ ಸೇವಾ (ವನಿಅ) ನಿಯಮಗಳು 1957ರ ನಿಯಮ 28(ಎ) ರಂತೆ ಶ್ರೀ ಬಿ.ಕೆ. ಸೈಯದ್‌ರವರು ಕೊನೆಯದಾಗಿ ಕಚೇರಿಗೆ ಸಲ್ಲಿಸಿದ್ದ ನಿವಾಸದ ಪ್ರಮುಖ ಭಾಗದಲ್ಲಿ ದಿನಾಂಕ: 23.9.2002 ರಂದು ಅಂಟಿಸಿ ಮಹಜರ್ ಮೂಲಕ ಜಾರಿ ಮಾಡಲಾಗಿದೆ. ಆಪಾದಿತ ಅಧಿಕಾರಿಯು ತಮ್ಮ ವಿರುದ್ಧದ ಆರೋಪಗಳಿಗೆ ನಿಗದಿತ ಅವಧಿಯಲ್ಲಿ ಯಾವುದೇ ಲಿಖಿತ ಹೇಳಿಕೆಯನ್ನು ಸಲ್ಲಿಸಿರುವುದಿಲ್ಲ. ಆದ್ದರಿಂದ ಆಪಾದಿತ ಅಧಿಕಾರಿಯ ವಿರುದ್ಧದ ಆರೋಪಗಳ ಬಗ್ಗೆ ವಿವರವಾದ ಇಲಾಖಾ ವಿಚಾರಣೆಯನ್ನು ನಡೆಸಲು ತೀರ್ಮಾನಿಸಿ ಮೇಲೆ ಕ್ರಮ ಸಂಖ್ಯೆ: 4 ರಲ್ಲಿ ಓದಲಾದ ಆದೇಶದಲ್ಲಿ ಗುಲ್ಬರ್ಗಾ ಲೋಕೋಪಯೋಗಿ ವೃತ್ತದ ಅಧೀಕ್ಷಕ ಇಂಜಿನಿಯರ್‌ರವರನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಿಸಲಾಗಿತ್ತು.

ವಿಚಾರಣಾಧಿಕಾರಿಯವರು ನಿಯಮಾನುಸಾರ ಇಲಾಖಾ ವಿಚಾರಣೆಯನ್ನು ಕೈಗೊಂಡು ಸರ್ಕಾರಕ್ಕೆ ವರದಿಯನ್ನು ಮೇಲೆ ಕ್ರಮ ಸಂಖ್ಯೆ: 5 ರಲ್ಲಿ ಓದಲಾದಂತೆ ಸಲ್ಲಿಸಿರುತ್ತಾರೆ. ವಿಚಾರಣಾ ವರದಿಯಲ್ಲಿ ಆಪಾದಿತ ಅಧಿಕಾರಿಯ ವಿರುದ್ಧದ ಆರೋಪಗಳು ಸಾಬೀತಾದ ಕಾರಣ ಈ ವಿಚಾರಣಾ ವರದಿಯನ್ನು ಅನುಸರಿಸಿ ಕ್ರಮ ಕೈಗೊಳ್ಳುವ ಮೊದಲು ಆಪಾದಿತ ಅಧಿಕಾರಿಗೆ 2ನೇ ಕಾರಣ ಕೇಳುವ ನೋಟೀಸ್‌ನೊಂದಿಗೆ ವಿಚಾರಣಾ ವರದಿಯನ್ನು ದಿನಾಂಕ: 9.7.2003 ರಂದು ಕರ್ನಾಟಕ ಸರ್ಕಾರಿ ಸೇವಾ (ವನಿಅ) ನಿಯಮಗಳು 1957ರ ನಿಯಮ 28(ಎ) ರಂತೆ ಮಹಜರ್ ಮೂಲಕ ಜಾರಿ ಮಾಡಲಾಗಿದೆ. ಪ್ರತಿಯಾಗಿ ಆಪಾದಿತರು ಸರ್ಕಾರಕ್ಕೆ ಯಾವುದೇ ಲಿಖಿತ ಹೇಳಿಕೆಯನ್ನು ಸಲ್ಲಿಸಿರುವುದಿಲ್ಲ.

ವಿಚಾರಣಾಧಿಕಾರಿಯವರ ವರದಿಯನ್ನು ಪರಿಶೀಲಿಸಲಾಗಿ ಶ್ರೀ ಬಿ.ಕೆ. ಸೈಯದ್, ಸಹಾಯಕ ಇಂಜಿನಿಯರ್‌ರವರಿಗೆ ಇಲಾಖಾ ವಿಚಾರಣೆಗೆ ಹಾಜರಾಗುವಂತೆ ದಿನಾಂಕ: 21.3.2003, 8.4.2003 ರಂದು ನೋಟೀಸುಗಳನ್ನು ಕೊನೆಯದಾಗಿ ಕಛೇರಿಗೆ ಸಲ್ಲಿಸಿದ್ದ ವಿಳಾಸಕ್ಕೆ ಜಾರಿ ಮಾಡಲಾಗಿದ್ದು ಸದರಿ ನೋಟೀಸುಗಳು ಜಾರಿಯಾಗದೇ ವಾಪಸ್ಸು ಬಂದಿರುತ್ತವೆಯೆಂದು, ಅಂತಿಮವಾಗಿ ದಿನಾಂಕ: 8.5.2003 ರಂದು ಇಲಾಖಾ ವಿಚಾರಣೆಗೆ ಹಾಜರಾಗುವಂತೆ ಕ.ನಾ.ಸೇ. (ವನಿಅ) ನಿಯಮಗಳು 1957ರ ನಿಯಮ 28(ಎ) ಪ್ರಕಾರ ಕನ್ನಡ ದಿನಪತ್ರಿಕೆ

ಪ್ರಜಾವಾಣಿ ಮತ್ತು ಆಂಗ್ಲ ದಿನಪತ್ರಿಕೆ The Hindu ಗಳಲ್ಲಿ ದಿನಾಂಕ: 28.4.2003 ರಂದು ಪ್ರಕಟಿಸಲಾಗಿದ್ದರೂ ಸಹ ಆಪಾದಿತರು ಇಲಾಖಾ ವಿಚಾರಣೆಗೆ ಹಾಜರಾಗದೇ ಇರುವುದರಿಂದ ಆಪಾದಿತ ಅಧಿಕಾರಿಯನ್ನು ಸಂಪರ್ಕಿಸಲು ಸಾಧ್ಯವಾಗದ ಹಿನ್ನೆಲೆಯಲ್ಲಿ ಅವರ ಗೈರು ಹಾಜರಿಯಲ್ಲಿ ಇಲಾಖಾ ವಿಚಾರಣೆಯನ್ನು ನಡೆಸಿರುವುದಾಗಿ ತಿಳಿಸಿರುತ್ತಾರೆ. ಮುಂದುವರೆದು ಶ್ರೀ ಬಿ.ಕೆ. ಸೈಯದ್ ಸಹಾಯಕ ಇಂಜಿನಿಯರ್‌ರವರು ಬೀದರ್ ಲೋಇ ಉಪ-ವಿಭಾಗದಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ: 17.2.1979 ರಂದು ದಿನಾಂಕ: 19.2.1979 ರಿಂದ 30 ದಿನಗಳ ಅಧ್ಯರ್ಪಣ ರಜೆಯ ಜೊತೆಗೆ ಗಳಿಕೆ ರಜೆ ಮಂಜೂರು ಮಾಡುವಂತೆ ಕೋರಿ ಅರ್ಜಿ ಸಲ್ಲಿಸಿ ಕೇಂದ್ರ ಸ್ಥಾನವನ್ನು ಬಿಟ್ಟುಹೋದವರು ರಜೆ ಮುಗಿದ ನಂತರ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲವೆಂದು, ಕೆಲಸಕ್ಕೆ ಹಾಜರಾಗದೇ ದಿನಾಂಕ: 8.9.1979ರ ಅರ್ಜಿಯಲ್ಲಿ ವಿದೇಶಕ್ಕೆ ಹೋಗಲು ಆಕ್ಷೇಪಣಾ ರಹಿತ ಪ್ರಮಾಣ ಪತ್ರ ನೀಡುವಂತೆ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಬೀದರ್ ಇವರಿಗೆ ವಿನಂತಿಸಿದ್ದು ವಿದೇಶ ಪ್ರವಾಸ ಕೈಗೊಂಡು ಪುನಃ ದಿನಾಂಕ: 7.10.1979 ರಂದು ಅರ್ಜಿ ಸಲ್ಲಿಸಿ ಹಜ್ ಯಾತ್ರೆಗೆ ಹೋಗಲು ಅನುಮತಿ ಕೋರಿ ಪತ್ರ ಬರೆದಿರುತ್ತಾರೆಂದು, ಆದರೆ ಅವರು ನಿಯಮಾನುಸಾರ ಸಕ್ಷಮ ಪ್ರಾಧಿಕಾರದ ಅನುಮತಿ ಪಡೆಯದೇ ವಿದೇಶ ಪ್ರವಾಸ ಕೈಗೊಂಡು ಕರ್ನಾಟಕ ಸರ್ಕಾರಿ ಸೇವಾ (ನಡತೆ) ನಿಯಮಗಳು 1966ರ ನಿಯಮ 3(1)(iii) ನ್ನು ಉಲ್ಲಂಘಿಸಿರುತ್ತಾರೆಂದು, ತದನಂತರ ಕೆಲಸಕ್ಕೆ ಹಾಜರಾಗದೇ ತೀವ್ರತರವಾದ ಕರ್ತವ್ಯಲೋಪವೆಸಗಿರುವುದಾಗಿಯೂ, ಆಪಾದಿತ ನೌಕರರಿಗೆ ಇಲಾಖಾ ವಿಚಾರಣೆ ಸಮಯದಲ್ಲಿ ಆರೋಪಗಳ ಬಗ್ಗೆ ವಿವರಣೆ ನೀಡಲು ಸಾಕಷ್ಟು ಸಮಯಾವಕಾಶ ನೀಡಿದ್ದರೂ ಸಹ ಯಾವುದೇ ಪ್ರತಿಕ್ರಿಯೆ ವ್ಯಕ್ತಪಡಿಸದೇ ಇಲಾಖಾ ವಿಚಾರಣೆಗೆ ಗೈರು ಹಾಜರಾದ ಕಾರಣ ಏಕಪಕ್ಷೀಯವಾಗಿ ಇಲಾಖಾ ವಿಚಾರಣೆ ನಡೆಸಿದ್ದು ಶ್ರೀ ಬಿ.ಕೆ. ಸೈಯದ್, ಸಹಾಯಕ ಇಂಜಿನಿಯರ್ ಇವರ ವಿರುದ್ಧದ ಆರೋಪವು ಸಾಬೀತಾಗುತ್ತದೆಯೆಂದು ವಿಚಾರಣಾಧಿಕಾರಿಯವರು ಅಭಿಪ್ರಾಯ ಪಟ್ಟಿರುತ್ತಾರೆ.

ಆಪಾದಿತ ಅಧಿಕಾರಿಯು ಇಲಾಖಾ ವಿಚಾರಣೆಯ ಪ್ರಾರಂಭದಿಂದಲೂ ಯಾವುದೇ ಹೇಳಿಕೆ : ಪ್ರತಿಕ್ರಿಯೆ ನೀಡದೇ ಇಲಾಖಾ ವಿಚಾರಣಾ ನಡವಳಿಯಿಂದ ದೂರ ಉಳಿದಿದ್ದು ಅವರಿಗೆ ನೀಡಲಾದ ಎಲ್ಲಾ ಅವಕಾಶಗಳನ್ನು ವ್ಯರ್ಥಪಡಿಸಿಕೊಂಡಿರುತ್ತಾರೆ. ಯಾವುದೇ ಸರ್ಕಾರಿ ನೌಕರರು ನಾಲ್ಕು ತಿಂಗಳಿಗೂ ಹೆಚ್ಚಿನ ಅವಧಿಗೆ ಕರ್ತವ್ಯದಿಂದ ಅನಧಿಕೃತ ಗೈರುಹಾಜರಾದಲ್ಲಿ ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿಗಳ ನಿಯಮ 108ರ ಅನುಸಾರ ಶಿಸ್ತು ಕ್ರಮಕ್ಕೆ ಅರ್ಹರಿದ್ದು ಅದರಂತೆ ಶ್ರೀ ಬಿ.ಕೆ. ಸೈಯದ್ ಸಹಾಯಕ ಇಂಜಿನಿಯರ್ ಇವರ ವಿರುದ್ಧವೂ ಸಹ ಇಲಾಖಾ ವಿಚಾರಣೆಯನ್ನು ಕೈಗೊಳ್ಳಲಾಗಿದ್ದು ಅವರ ವಿರುದ್ಧದ ಆರೋಪಗಳು ಸ್ಪಷ್ಟವಾಗಿ ಸಾಬೀತಾಗಿರುತ್ತವೆ. ಆದ್ದರಿಂದ ಸಾಬೀತಾದ ಆರೋಪಗಳ ಗಂಭೀರತೆಗನುಗುಣವಾಗಿ ದಂಡನೆಯನ್ನು ವಿಧಿಸಲು ಸರ್ಕಾರವು ತೀರ್ಮಾನಿಸಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಲೋಇ 5 ಸೇಇವಿ 2000, ಬೆಂಗಳೂರು, ದಿನಾಂಕ: 19ನೇ ಆಗಸ್ಟ್ 2003**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ ಸರ್ಕಾರವು ಶ್ರೀ ಬಿ.ಕೆ. ಸೈಯದ್, ಸಹಾಯಕ ಇಂಜಿನಿಯರ್, ಲೋಇ ಉಪ-ವಿಭಾಗ, ಬೀದರ್ ಇವರ ವಿರುದ್ಧದ ಸಾಬೀತಾದ ಆರೋಪದ ಗಂಭೀರತೆಗನುಗುಣವಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಇವರನ್ನು ಕರ್ನಾಟಕ ಸರ್ಕಾರಿ ಸೇವಾ (ವನಿಅ) ನಿಯಮಗಳು 1957ರ ನಿಯಮ 8(viii) ರಂತೆ ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವೆಂಕಟರಸಪ್ಪ**

ಪಿ.ಆರ್. 1064

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ ಇಲಾಖೆ (ಸೇವೆಗಳು-ಸಿ).

## FOREST, ECOLOGY AND ENVIRONMENT SECRETARIAT

**Sub:** Renewal of Mining lease No.2148 in favour of M/s H.G. Ranganagoud, Hospet for iron ore mines over an area of 41.16 ha. of forest land in Swamymalai Block of Sandur Range, Bellary, District.

**Read:** 1) Letter No.A5(B1) MNG.CR.9/2001-2002, dated: 13.3.2002 of the Principal Chief Conservator of Forests, Bangalore.

2) State Government letter of even number dated: 19.12.2002.

3) Government of India, Ministry of Environment and Forests, New Delhi, letter No.2-1/99-FC dated: 5.2.2003 and No.8-5/2003-FC dated: 7/8th July 2003.

**PREAMBLE:**

The principal Chief Conservator of Forests, Bangalore had sent proposal vide his letter dated: 13.3.2002 read at (1) above for renewal of mining lease No.2148 in favour of M/s H.G. Ranganagoud, Hospet for iron ore mines over an area of 41.16 ha. of forest land in Swamymalai Block of Sandur Taluk, Bellary District under section-2 of Forest (Conservation) Act, 1980 for a period of twenty years subject to certain conditions.

The proposal of Principal Chief Conservator of Forests was recommended to Government of India, Ministry of Environment and Forests, New Delhi vide letter of even number dated: 19.12.2002 read at (2) above and its approval was sought under section-2 of Forest (Conservation) Act, 1980 for the

renewal of mining lease No.2148 and grant of temporary working permission in favour of M/s H.G. Rangangoud, Hospet.

The Government of India, Ministry of Environment and Forests, New Delhi vide its letter dated: 5.2.2003 read at (3) above after considering all the facts of the proposal have accorded temporary working permission for six months with effect from 05.02.2003 subject to the conditions that no new area shall be broken up and all environmental safeguards shall be adhered to.

Thereafter, Government of India, Ministry of Environment and Forests, New Delhi vide its letter dated: 7/8th July 2003 read at (3) above after careful consideration of the proposal of the State Government on the basis of the recommendation of the Advisory Committee, the Central Government has conveyed its approval under Section 2 of Forest (Conservation) Act, 1980 for renewal of mining lease No.2148 in favour of M/s H.G. Ranganagoud, Hospet for Iron Ore Mines over 41.16 ha. of already broken-up forest land in district Bellary sujbect to fulfillment of certain conditions. Hence, this order.

**Government Order No.FEE 26 FFM 2002, Bangalore, Dated: 16th August 2003**

After examining all aspect of the matter and inview of the approval accorded to the proposal by the Government of India, Ministry of Environment and Forests, New Delhi, Government are pleased to accord its approval under section 2 of Forest (Conservation) Act, 1980 for renewal of mining lease No.2148 in favour of M/s H.G. Ranganagoud, Hospet for Iron Ore Mines over 41.16 ha of already broken-up forest land in Swamymalai Block of Sandur Range. Bellary District Subject to the following conditions:-

1. Legal status of the forest shall remain unchanged.
2. RCC pillars of 4 feet height shall be erected by the User Agency to demarcate the area at the project cost and the pillars will be marked with forward and back bearing.
3. The User Agency shall maintain Safety Zone already created over equivalent degraded forest land and will also maintain the plantation done over an area one and half times in extent of the safety zone at the project cost.
4. The User Agency will reclaim the area concurrent to mining at the project cost.
5. Trees shall be felled only when it becomes necessary and by prior permission of the State Forest Department.
6. No new construction activity shall be allowed on a forest land.
7. No. labour camps shall be established on the forest land.
8. Sufficient firewood shall be provided by the User Agency to the labourers at the project cost after purchase from the State Forest Department/Forest Department Corporation.
9. The User Agency shall ensure that there should be no damage to the available wildlife.
10. The approval under the Forest (Conservation) Act, 1980 is subject to the clearance under the Environment (Protection) Act, 1986, if applicable.
11. The lease period for 20 years shall be co-terminus with the lease granted under MMRD Act, 1957.
12. The forest land shall not be used for any purpose other than that specified in the proposal.
13. Inspector General of Forests and a member of FAC shall visit the site to look into the feasibility if any other condition like imposition of additional compensatory afforestation etc. is required.
14. Any other condition that the State Government as well as CCF (Central), Regional Office, Bangalore, and PCCF may impose from time to time for the protection and improvement of flora and fauna in the forest area.
15. The lessee shall pay usual lease rent and supervision charges as prescribed by the Govt. from time to time
16. The lessee shall deposit the amount at prevailing rate towards raising of compensatory afforestation if the Govt. of India. MOEF stipulates the same
17. The lessee shall open a firewood depot to supply firewood to the employees and labourers at the subsidized rates and the quantity to be prescribed by the Deputy Conservator of Forests concerned.
18. The lessee shall undertake the afforestation measures to vacant area of the leased.
19. The lessee shall carry out soil and water conservation measures and other necessary measures as advised by the Forest Dept.
20. The lessee shall undertake to protect rigidly the leased area and forest area surrounding the area upto one Km. From the leased area.

21. The lessee shall not cut any trees without prior permission of the Forest Dept. and all produce of permitted fellings shall be handed over to Forest Dept. Under cover of receipt.
22. The lessee shall abide by all the conditions prescribed by Govt. of India and Govt. of Karnataka.
23. The lessee shall execute an agreement with the Forest Department binding himself to abide by all usual conditions and terms as per orders of the Govt. as well as Principal Chief Conservator of Forests.
24. The lessee shall take-up the planting work on the static dumps during the advance mining operations.
25. In case of violation of Agreement conditions of Forest Department shall have right to suspend the mining activities.

By order and in the name of the Governor of Karnataka,

**S.R. VATSALA**

P.R. 1065

Under Secretary to Government,
Forest, Ecology & Environment Department.

**Sub:** Diversion of 594.10 ha. of forest land for rehabilitation of displaced persons due to establishment of Naval Base Project at Karwar-modification-reg.

**Read:**
1. G.O.No. FEE 43 FGL 90(P), dated: 3.9.1996.
2. Letter No. SB/2015, dated: 13.11.1996 of Project Sea Bird, New Delhi.
3. Letter No. A5.GFL.CR.161/93-94, dated: 02.11/12.1996 and 19.9.1997 of Principal Chief Conservator of Forests, Bangalore.

**PREAMBLE:**

In Government order dated: 03.09.1996 read at (1) above sanction was accorded for release of 594.10 ha. of forest land for rehabilitation of displaced persons due to establishment of III Naval Base Project subject to certain conditions.

Project Sea Bird, New Delhi vide their letter dated: 13.11.1996 read at (2) above has stated that as per the condition No.3 of the Government Order dated: 03.09.1996 read at (1) above the lessee has to pay lease rent at Rs.625/- per ha. per annum or part thereof. The entire forest land is being handed over by the State Government to Deputy Commissioner, U.K. District, Karwar, who is over all in-charge of setting up of the Rehabilitation facilities for the displaced persons as per the rehabilitation package sanctioned by State Government in 1989. The diverted forest land would be converted into house sites and agricultural plots and these sites/plots would, thereafter, be allotted free of cost to displaced persons. The Project Sea Bird is a Central Government Project and therefore the responsibility of the rehabilitation of displaced persons rests with the State Government.

Under these circumstances Project Sea Bird authority has requested the State Government to delete the conditions No.3.

The Principal Chief Conservator of Forests, Bangalore vide his letter dated: 2.11.1996 read at (3) above has recommended to consider the request of the project Sea Bird favourably.

In respect of condition No.4 stipulated in G.O. dated: 03.09.1996 read at (1) above, Principal Chief Conservator of Forests, Bangalore in his letter dated: 19.9.1997 read at (3) above has clarified that the Project Sea Bird Authorities have already paid a sum of Rs.98 lakhs and compensatory afforestation has been raised in 631.25 ha. during 1991-92 rains. Therefore, there is no need for condition No.4 about raising of compensatory afforestation at the project cost and hence recommended to delete this condition.

The proposal of the Principal Chief Conservator of Forests has been examined in detail in consultation with Finance Department and the following orders are issued.

**Government Order No. FEE 43 FGL 90(P), Bangalore, Dated: 12th August 2003**

In the circumstances explained in the preamble above, Government are pleased to delete the condition No.3 and 4 stipulated in G.O.No. FEE 43 FGL 90(P), dated: 03.09.1996.

This order issues with the concurrence of the Finance Department vide its Note No. FD 859: Exp-2:03, dated: 30.06.2003.

By order and in the name of the Governor of Karnataka,

**S.R. VATSALA**

P.R. 1066

Under Secretary to Government,
Forest, Ecology & Environment Department.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ಸಿಆಸುಇ 19 ಸೇಇನಿ 2003, ಬೆಂಗಳೂರು, ದಿನಾಂಕ: 30ನೇ ಜುಲೈ 2003**

ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000ದ (2000ದ ಕರ್ನಾಟಕ ಅಧಿನಿಯಮ 28) ಸೆಕ್ಷನ್ 3(ಬಿ)ರ ಅಡಿಯಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು) ವಿಭಾಗಕ್ಕೆ ಸಂಬಂಧಿಸಿದ ವಿವರಗಳನ್ನು ಈ ಮೂಲಕ ಪ್ರಕಟಣೆಗೊಳಿಸಲಾಗಿದೆ.

1. **ಸಂಸ್ಥೆಯ ವಿವರ ಹಾಗೂ ಅದರ ಕಾರ್ಯ ಮತ್ತು ಕರ್ತವ್ಯಗಳು:**

(ಶಾಖಾವಾರು ವಿವರಗಳು ಅನುಬಂಧದಲ್ಲಿರುವಂತಿದೆ).

(ಎ) ಸಿಆಸು ಇಲಾಖೆಯ ಸೇವೆಗಳು ವಿಭಾಗದ (ಸಂಸ್ಥೆಯ) ವಿವರ ಈ ಕೆಳಕಂಡಂತೆ ಇದೆ.




**(ಬಿ) ಕಾರ್ಯ ಮತ್ತು ಕರ್ತವ್ಯಗಳು:**

(1) ಕರ್ನಾಟಕ ವೃಂದ ಐ.ಎ.ಎಸ್., ಐ.ಪಿ.ಎಸ್., ಐ.ಎಫ್.ಎಸ್., ಕೆ.ಎ.ಎಸ್., ಇಲಾಖಾ ಮುಖ್ಯಸ್ಥರು, ಮುಖ್ಯ ಅಭಿಯಂತರರುಗಳು ಹಾಗೂ ಸಚಿವಾಲಯದ ಗ್ರೂಪ್-ಎ ಅಧಿಕಾರಿಗಳ ಸೇವಾ ವಿಷಯಗಳು, ಆಸ್ತಿ ಮತ್ತು ಹೊಣೆಗಾರಿಕೆ ಪಟ್ಟಿ ಪರಿಶೀಲನೆ, ಶಿಸ್ತು ಪ್ರಕರಣಗಳು ಹಾಗೂ ಜೇಷ್ಠತಾ ಪಟ್ಟಿ ತಯಾರಿಕೆ.

(2) ರಾಜ್ಯ ಉಚ್ಚ ನ್ಯಾಯಾಲಯದ ನ್ಯಾಯಾಧೀಶರ ಹಾಗೂ ಜಿಲ್ಲಾ ನ್ಯಾಯಾಧೀಶರ ಸೇವಾ ವಿಷಯಗಳು.

(3) ಬೆಂಗಳೂರು ಮತ್ತು ಮೈಸೂರು ಅರಮನೆ ಆರ್ಜನೆ ಮತ್ತು ವರ್ಗಾವಣೆ ಅಧಿನಿಯಮಗಳಿಗೆ ಸಂಬಂಧಿಸಿದ ವಿಷಯ.

2. **ಅಧಿಕಾರಿಗಳ ಅಧಿಕಾರ ಹಾಗೂ ಕರ್ತವ್ಯಗಳು ಹಾಗೂ ಕಾರ್ಯ ವಿಧಾನದ ವಿವರ:**

ಸಿ.ಆ.ಸು.ಇ. (ಸೇವೆಗಳು) ವಿಭಾಗದ ಅಧಿಕಾರಿಗಳಿಗೆ ನೀಡಲಾದ ಅಧಿಕಾರಿಗಳ ವಿವರವನ್ನು ದಿನಾಂಕ: 15.5.1996ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 89 ಎಎಆರ್ 95 ರಲ್ಲಿ ನಿಗದಿಪಡಿಸಲಾಗಿದೆ. ಅವರ ಕರ್ತವ್ಯಗಳನ್ನು ಸಚಿವಾಲಯದ ಕಛೇರಿ ವಿಧಾನದ ಪರಿಷ್ಕೃತ ಕೈಪಿಡಿ (Revised Secretariat Manual of office Procedure) ಈ ಕೈಪಿಡಿಯಲ್ಲಿ ವಿವರಿಸಲಾಗಿದೆ.

3. **ಸಾರ್ವಜನಿಕ ಪ್ರಾಧಿಕಾರದ ಕರ್ತವ್ಯಗಳನ್ನು ನಿರ್ವಹಿಸುವುದಕ್ಕಾಗಿ, ಅದು ನಿಗದಿಪಡಿಸಿದ ಮಾನದಂಡ:**

ಸಚಿವಾಲಯದ ಕಛೇರಿ ವಿಧಾನದ ಪರಿಷ್ಕೃತ ಕೈಪಿಡಿಯಲ್ಲಿ ನಿಗದಿಪಡಿಸಿರುವ ಕಾರ್ಯವಿಧಾನ ಹಾಗೂ ಸಿಆಸು ಇಲಾಖೆಯ ಸೇವೆಗಳು ವಿಭಾಗವು ನಿರ್ವಹಿಸುವ ವಿಷಯಗಳಿಗೆ ಸಂಬಂಧಿಸಿ, ಅಧಿನಿಯಮಗಳು, ನಿಯಮಗಳು, ವಿನಿಯಮಗಳು, ಸುತ್ತೋಲೆಗಳು, ಭಾರತ ಸರ್ಕಾರ ಹೊರಡಿಸಿರುವ ನಿಯಮಗಳು ಹಾಗೂ ಸ್ಥಾಯೀ ಸೂಚನೆಗಳನ್ನು ಮಾನದಂಡವಾಗಿ ಇಟ್ಟುಕೊಳ್ಳಲಾಗಿದೆ.

4. **ಮಾಹಿತಿಗಳನ್ನು ಪಡೆಯಲು ನಾಗರೀಕರಿಗೆ ಲಭ್ಯವಿರುವ ಸೌಲಭ್ಯಗಳು ಹಾಗೂ ನಾಗರೀಕರಿಗೆ ನೀಡಬಹುದಾದ ಮಾಹಿತಿ:**

ಶಾಖೆಗಳಲ್ಲಿ ನಿರ್ವಹಿಸುತ್ತಿರುವ ಅಧಿಕಾರಿಗಳ ವೈಯಕ್ತಿಕ ವಿವರಗಳನ್ನು ಅಧಿಕಾರಿಗಳ ನೌಕರರಪಟ್ಟಿ ಪ್ರಕಟಿಸುವ ಮೂಲಕ ಸಾರ್ವಜನಿಕರಿಗೆ ನೀಡಲಾಗುತ್ತಿದೆ. ಸೇವೆಗಳು-ಇ ಶಾಖೆಯಲ್ಲಿ ನಿರ್ವಹಿಸುತ್ತಿರುವ ಶಿಸ್ತು ಪ್ರಕರಣಗಳ ಪೈಕಿ ಅಧಿಕಾರಿ : ನೌಕರರನ್ನು ಅಮಾನತ್ತುಗೊಳಿಸಿದ ಆದೇಶ, ಅಮಾನತ್ತು ರದ್ದುಪಡಿಸುವ ಆದೇಶ, ವಿಚಾರಣಾಧಿಕಾರಿಗಳನ್ನು ನೇಮಿಸುವ ಆದೇಶ, ಇಲಾಖಾ ವಿಚಾರಣೆಯಲ್ಲಿ ಶಿಸ್ತು ಪ್ರಾಧಿಕಾರಗಳನ್ನು ನೇಮಿಸುವ ಆದೇಶ, ಅಂತಿಮವಾಗಿ ಹೊರಡಿಸುವ ಆದೇಶಗಳನ್ನು ನಾಗರೀಕರಿಗೆ ನೀಡಲಾಗುವುದು. ಯಾವ ಕೋರಿಕೆಗಳು ಸಾರ್ವಜನಿಕ ಹಿತದೃಷ್ಟಿಯಿಂದ ಕೂಡಿರುತ್ತವೆಯೋ ಅಂತಹ ಸಂದರ್ಭದಲ್ಲಿ ಮೇಲ್ಕಂಡ ಮಾಹಿತಿ : ದಾಖಲೆಗಳನ್ನು ಶಿಸ್ತು ಪ್ರಕರಣಗಳಿಗೆ ಸಂಬಂಧಿಸಿದ ಇತರೆ ಯಾವುದೇ ಮಾಹಿತಿ : ದಾಖಲೆಗಳನ್ನು ನೀಡಲಾಗುವುದು. ಖಾಸಗಿ ಹಕ್ಕುಗಳಿಗೆ ಚ್ಯುತಿ ಬಾರದಿದ್ದಲ್ಲಿ ಕೋರಿಕೆಗಳು ಸಾರ್ವಜನಿಕ ಹಿತದೃಷ್ಟಿಯಿಂದ ಕೂಡಿದ್ದಲ್ಲಿ ಕಲಂ 6 (ಡಿ)ಯ ಪರಂತುಕದ ಮೇರೆಗೆ ಅಧಿಕಾರಿಗಳ ಆಸ್ತಿ:ಋಣ ಪಟ್ಟಿಗಳ ಕುರಿತಾದ ಮಾಹಿತಿಗಳನ್ನು ನೀಡಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿ.ಆ.ಸು. ಇಲಾಖೆ (ಸೇವೆಗಳು-3).

**ಅಧಿಸೂಚನೆ ಸಂಖ್ಯೆ: ಸಿಆಸುಇ 19 ಸೇಇನಿ 2003, ದಿನಾಂಕ: 30.07.2003ರ ಅನುಬಂಧ ಸಿಆಸುಇ ಸೇವೆಗಳು ವಿಭಾಗದ ಶಾಖಾವಾರು ವಿವರಗಳು**




**ಕೆ. ರಘುರಾಮ್ ಭಂಡಾರಿ**
ಸರ್ಕಾರದ ಅಧೀನ ಕಾರ್ಯದರ್ಶಿ, ಸಿ.ಆ.ಸು. ಇಲಾಖೆ (ಸೇವೆಗಳು-3).

ಪಿ.ಆರ್. 1035

## ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ

**ವಿಷಯ:** ದಿನಾಂಕ: 1.7.84ರ ನಂತರ ದಿನಗೂಲಿಗಳಾಗಿ ಕರ್ತವ್ಯ ನಿರ್ವಹಿಸುತ್ತಿರುವ ಶ್ರೀ ನಾಗರಾಜು ಮತ್ತಿತರ 53 ಮಂದಿ ದಿನಗೂಲಿ ನೌಕರರನ್ನು ಸರ್ಕಾರಿ ಸೇವೆಯಲ್ಲಿ ಸಕ್ರಮಗೊಳಿಸುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಪತ್ರ ಸಂಖ್ಯೆ: ಕೃತೋಇ 81 ತೋಕಾವಿ 99, ದಿನಾಂಕ: 3.2.2003.

2. ತೋಟಗಾರಿಕೆ ನಿರ್ದೇಶಕರ ಪತ್ರ ಸಂಖ್ಯೆ: ತೋಇ/ಅಸಿ/ವಿನಿ6/3/2001-2002, ದಿನಾಂಕ: 31.3.2003 ಮತ್ತು 27.5.2003.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪತ್ರದಲ್ಲಿ ಶ್ರೀ ನಾಗರಾಜ್ ಹಾಗೂ ಇತರೆ 53 ಮಂದಿ ತೋಟಗಾರರು ರಾಜ್ಯ ಉಚ್ಚ ನ್ಯಾಯಾಲಯದಲ್ಲಿ ದಾಖಲಿಸಿದ್ದ ರಿಟ್ ಅರ್ಜಿ ಸಂಖ್ಯೆ: 22934-987/99 ರಲ್ಲಿ ನ್ಯಾಯಾಲಯವು ದಿನಾಂಕ: 11.8.2000 ರಂದು ನೀಡಲಾಗಿದ್ದ ತೀರ್ಪಿನ ವಿರುದ್ಧ ರಾಜ್ಯ ಉಚ್ಚನ್ಯಾಯಾಲಯದಲ್ಲಿ ದಾಖಲಿಸಿದ್ದ ರಿಟ್ ಅಪೀಲನ್ನು ನ್ಯಾಯಾಲಯವು ದಿನಾಂಕ: 29.3.2001ರ ತೀರ್ಪಿನಲ್ಲಿ ವಜಾ ಮಾಡಿದ್ದ ಹಿನ್ನೆಲೆಯಲ್ಲಿ ಭಾರತ ಸರ್ವೋಚ್ಚ ನ್ಯಾಯಾಲಯದಲ್ಲಿ ಎಸ್.ಎಲ್.ಪಿ. (ಸಿವಿಲ್) ಅರ್ಜಿಯನ್ನು ದಾಖಲಿಸಿತ್ತು. ಸದರಿ ಎಸ್.ಎಲ್.ಪಿ. (ಸಿವಿಲ್) ಅರ್ಜಿಯನ್ನು ಭಾರತ ಸರ್ವೋಚ್ಚ ನ್ಯಾಯಾಲಯವು ವಜಾ ಮಾಡಿದ್ದ ಕಾರಣ ರಾಜ್ಯ ಉಚ್ಚ ನ್ಯಾಯಾಲಯವು ರಿಟ್ ಅರ್ಜಿ ಸಂಖ್ಯೆ: 22934-987/99ರ ಮೇಲೆ ದಿನಾಂಕ: 11.8.2000 ರಂದು ನೀಡಿದ್ದ ತೀರ್ಪಿನ ಪ್ರಕಾರ 10 ವರ್ಷಗಳ ಸತತ ಸೇವೆ ಸಲ್ಲಿಸಿರುವ ಅರ್ಹ ಅರ್ಜಿದಾರರನ್ನು ಮಾತ್ರ ಮೂಲ ದಾಖಲೆಗಳ ಪರಿಶೀಲನೆಯ ನಂತರ ಸಕ್ರಮಗೊಳಿಸಲು ಸರ್ಕಾರವು ಅನುಮೋದನೆ ನೀಡಲಾಗಿತ್ತು.

ಮೇಲೆ ಓದಲಾದ (2)ರ ಪತ್ರದಲ್ಲಿ ಕಬ್ಬನ್ ಉದ್ಯಾನವನದಲ್ಲಿ 67 ಹುದ್ದೆಗಳು ಖಾಲಿ ಇರುತ್ತವೆ. ಆದರೆ ಈ ಪ್ರಕರಣದ 54 ಜನ ನೌಕರರಿಗಿಂತ ಮುಂಚೆಯೇ ಸೂಪರ್ ನ್ಯೂಮರರಿ ಹುದ್ದೆಯಲ್ಲಿ ಕಬ್ಬನ್ ಉದ್ಯಾನವನದ ಅಧೀನದಲ್ಲಿ ಕಾರ್ಯ ನಿರ್ವಹಿಸುತ್ತಿರುವ 147 ನೌಕರರ ಹೆಸರನ್ನು ತೋಟಗಾರಿಕೆ ಉಪ ನಿರ್ದೇಶಕರು, ಕಬ್ಬನ್ ಉದ್ಯಾನವನ ರವರು ಜಿಲ್ಲಾಧಿಕಾರಿಗಳು, ಬೆಂಗಳೂರು ಇವರಿಗೆ ಸಲ್ಲಿಸಿ ತಮ್ಮ ಅಧೀನದಲ್ಲಿ ಖಾಲಿಯಿರುವ ತೋಟಗಾರರ ಹುದ್ದೆಗೆ ಮರು ವಿನ್ಯಾಸಗೊಳಿಸಲು ಕೋರಿರುತ್ತಾರೆ. ಸರ್ಕಾರದ ಆದೇಶಾನುಸಾರ ಜಿಲ್ಲಾಧಿಕಾರಿಗಳು ಮರು ಹಂಚಿಕೆ ಮಾಡುವ ಅಧಿಕಾರ ಹೊಂದಿರುತ್ತಾರೆ. ಈ ಹಿನ್ನೆಲೆಯಲ್ಲಿ ತೋಟಗಾರಿಕೆ ಇಲಾಖೆಯಲ್ಲಿ ಖಾಲಿ ಇರುವ ಹುದ್ದೆಗೆ ನೇಮಕಾತಿ ಪ್ರಾಧಿಕಾರಿಗಳೇ ಈ 54 ಮಂದಿಯನ್ನು ನೇಮಕ ಮಾಡಲು ಅವಕಾಶವಿಲ್ಲ. ಆದ್ದರಿಂದ ಸೂಪರ್ ನ್ಯೂಮರರಿ ಹುದ್ದೆ ಸೃಷ್ಟಿಸಿ ನೀಡಿದಲ್ಲಿ ಇವರುಗಳನ್ನು ಸೂಪರ್ ನ್ಯೂಮರರಿ ಹುದ್ದೆಗೆ ಸಕ್ರಮಗೊಳಿಸಬಹುದಾಗಿದೆ. ನಂತರ ಅವರ ಹೆಸರನ್ನು ಜಿಲ್ಲಾಧಿಕಾರಿಗಳು, ಬೆಂಗಳೂರು ಇವರಿಗೆ ಕಳುಹಿಸಿ ಇಲಾಖೆಯಲ್ಲಿ ಖಾಲಿ ಇರುವ ಹುದ್ದೆಗೆ ಮರು ವಿನ್ಯಾಸಗೊಳಿಸಲು ಕೋರುವುದಾಗಿ ವರದಿ ಮಾಡಿರುತ್ತಾರೆ.

ಮೇಲಿನ ಅಂಶಗಳನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕೃತೋಇ 81 ತೋಕಾವಿ 99, ಬೆಂಗಳೂರು, ದಿನಾಂಕ: 20ನೇ ಆಗಸ್ಟ್ 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ತೋಟಗಾರಿಕೆ ಇಲಾಖೆಯಲ್ಲಿ ದಿನಾಂಕ: 1.7.84ರ ನಂತರ ನೇಮಕಗೊಂಡು ಸರ್ಕಾರಿ ಸೇವೆಯಲ್ಲಿ ಸಕ್ರಮಗೊಳಿಸಲು ಕೋರಿ ರಾಜ್ಯ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ದಾಖಲಿಸಿದ್ದ ಅರ್ಜಿದಾರರಾದ ಶ್ರೀ ನಾಗರಾಜು ಮತ್ತು ಇತರೆ 53 ಮಂದಿ ದಿನಗೂಲಿ ನೌಕರರನ್ನು ನ್ಯಾಯಾಲಯವು ನೀಡಿರುವ ತೀರ್ಪಿನಂತೆ ಸರ್ಕಾರಿ ಸೇವೆಯಲ್ಲಿ ಸಕ್ರಮಗೊಳಿಸಲು ದಿನಾಂಕ: 6.8.90ರ ಆದೇಶ ಸಂಖ್ಯೆ: ಡಿಪಿಎಆರ್ 2 ಎಸ್‌ಎಲ್‌ಸಿ 90ರ ದಿನಾಂಕ: 23.11.95ರ ಆದೇಶ ಡಿಪಿಎಆರ್ 2 ಎಸ್‌ಎಲ್‌ಸಿ 95 ಹಾಗೂ ದಿನಾಂಕ: 22.9.98ರ ಆದೇಶ ಸಂಖ್ಯೆ: ಡಿಪಿಎಆರ್ 14 ಎಸ್‌ಎಲ್‌ಸಿ 98ರ ಸೂಚನೆಗಳ ಪ್ರಕಾರ 54 ಗ್ರೂಪ್ - ಡಿ ಸೂಪರ್ ನ್ಯೂಮರರಿ ಹುದ್ದೆಗಳನ್ನು ಸೃಜಿಸಲು ಸರ್ಕಾರವು ಮಂಜೂರಾತಿ ನೀಡಿದೆ.

ಈ ಸೂಪರ್ ನ್ಯೂಮರರಿ ಹುದ್ದೆಗಳು ಈ ಆದೇಶ ಹೊರಡಿಸಿದ ದಿನಾಂಕದಿಂದ ಒಂದು ವರ್ಷದ ಅವಧಿಯವರೆಗೆ ಮಾತ್ರ ಅಸ್ತಿತ್ವದಲ್ಲಿರುತ್ತದೆ.

ದಿನಗೂಲಿ ನೌಕರರನ್ನು ಸಕ್ರಮಗೊಳಿಸುವ ಹಿನ್ನೆಲೆಯಲ್ಲಿ ಸರ್ಕಾರದಿಂದ ಹೊರಡಿಸಲಾಗಿರುವ ಎಲ್ಲಾ ಸ್ಥಾಯಿ ಆದೇಶಗಳು ಮಾರ್ಗಸೂಚಿಗಳು ಹಾಗೂ ಇತರೆ ಸೂಚನೆಗಳ ಅನುಗುಣವಾಗಿ ದಿನಗೂಲಿ ನೌಕರರನ್ನು ಸಕ್ರಮಗೊಳಿಸಲು ಈ ಸೂಪರ್ ನ್ಯೂಮರರಿ ಹುದ್ದೆಗಳನ್ನು ಒಂದು ವರ್ಷದ ಅವಧಿಗೆ ಮಾತ್ರ ಗಣನೆಗೆ ತೆಗೆದುಕೊಳ್ಳಲಾಗುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 680 ವೆಚ್ಚ-4/2003, ದಿನಾಂಕ: 5.7.2003ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಮಂಜುಳಗೀತ**

ಪಿ.ಆರ್. 1067 ಸರ್ಕಾರದ ಅಧೀನ ಕಾರ್ಯದರ್ಶಿ, ಕೃಷಿ ಮತ್ತು ತೋಟಗಾರಿಕೆ ಇಲಾಖೆ.

**ವಿಷಯ:** ಚನ್ನಗಿರಿ ತಾಲ್ಲೂಕಿನ ಹೊಸಹಳ್ಳಿ ಬೀಜೋತ್ಪಾದನಾ ಕೇಂದ್ರವನ್ನು ಪುನಃ ಕೃಷಿ ಇಲಾಖೆಗೆ ಹಿಂತಿರುಗಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಕೃತೋಇ 194 ಕೃವಿವಿ 89, ದಿನಾಂಕ: 15.12.1993.

2. ಕೃಷಿ ಆಯುಕ್ತರ ಪತ್ರ ಸಂಖ್ಯೆ: ಎಸ್‌ಎಫ್‌ಎಸ್:4:196ಎ:2001, ದಿನಾಂಕ: 10.01.2003 ಮತ್ತು ಸಂಖ್ಯೆ: ಉಕೃನಿ:ರಾಕೃಕ್ಷೆ:ಇಕೃಕ್ಷೆ:2003-04, ದಿನಾಂಕ: 06.07.2003.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ: 1 ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಚನ್ನಗಿರಿ ತಾಲ್ಲೂಕಿನ ಹೊಸಹಳ್ಳಿ ಬೀಜೋತ್ಪಾದನಾ ಕೇಂದ್ರವನ್ನು ಹೊರತುಪಡಿಸಿ ಇನ್ನೂಳಿದ 5 ಬೀಜೋತ್ಪಾದನಾ ಕೇಂದ್ರಗಳನ್ನು ಕರ್ನಾಟಕ ರಾಜ್ಯ ಬೀಜ ನಿಗಮ ನಿಯಮಿತದಿಂದ ಕೃಷಿ ಇಲಾಖೆಗೆ

ವರ್ಗಾಯಿಸಿ ಆದೇಶ ಹೊರಡಿಸಲಾಗಿತ್ತು. ಮೇಲೆ ಕ್ರಮ ಸಂಖ್ಯೆ: (2) ರಲ್ಲಿ ಓದಲಾದ ಕೃಷಿ ಆಯುಕ್ತರ ಪತ್ರಗಳಲ್ಲಿ ಸದರಿ ಬೀಜೋತ್ಪಾದಾನ ಕೇಂದ್ರವನ್ನು ಕರ್ನಾಟಕ ರಾಜ್ಯ ಬೀಜ ನಿಗಮ ನಿಯಮಿತವು "ಎಲ್ಲಿ ಹೇಗಿದೆಯೋ ಹಾಗೆ" ಎಂಬ ಆಧಾರದ ಮೇಲೆ ಹಿಂತಿರುಗಿಸುವಂತೆ ಕೋರಿರುತ್ತಾರೆ.

ಕೃಷಿ ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕೃತೋಇ 17 ಕೃಉಇ 2000, ಬೆಂಗಳೂರು, ದಿನಾಂಕ: 19ನೇ ಆಗಸ್ಟ್ 2003**

ಚನ್ನಗಿರಿ ತಾಲ್ಲೂಕಿನ ಹೊಸಹಳ್ಳಿ ಬೀಜೋತ್ಪಾದನಾ ಕೇಂದ್ರವನ್ನು "ಎಲ್ಲಿ ಹೇಗಿದೆಯೋ ಹಾಗೆ" ಎಂಬ ಆಧಾರದ ಮೇಲೆ ಕರ್ನಾಟಕ ರಾಜ್ಯ ಬೀಜ ನಿಗಮ ನಿಯಮಿತದಿಂದ ಕೃಷಿ ಇಲಾಖೆಯು ತನ್ನ ವಶಕ್ಕೆ ತೆಗೆದುಕೊಳ್ಳುವಂತೆ ಈ ಮೂಲಕ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಲ್. ರಾಜೇಶ್ವರಿ**

ಪಿ.ಆರ್. 1068 ಪೀಠಾಧಿಕಾರಿ-3, ಕೃಷಿ ಮತ್ತು ತೋಟಗಾರಿಕೆ ಇಲಾಖೆ.

**ಯೋಜನೆ, ಸಾಂಖ್ಯಿಕ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ**

**ವಿಷಯ:** ಬೀದರ್ ಜಿಲ್ಲೆ ಹುಮನಾಬಾದ್ ಮತ್ತು ಕೋಲಾರ ಜಿಲ್ಲೆ ಗೌರಿಬಿದನೂರು ಇಲ್ಲಿ ದೊಡ್ಡ ಪ್ರಮಾಣದ ಗ್ರಾಮೀಣ ವಿಜ್ಞಾನ ಕೇಂದ್ರಗಳನ್ನು ಸ್ಥಾಪಿಸುವ ಬಗ್ಗೆ.

**ಓದಲಾಗಿದೆ:**
1. ಕ.ರಾ.ವಿ.ಪ. ಪತ್ರ ಸಂಖ್ಯೆ: 6.5/ಎಸ್‌ಸಿ/ಜಿಸಿ/1725 ದಿನಾಂಕ: 24.03.2003.
2. ಕ.ರಾ.ವಿ.ಪ. ಪತ್ರ ಸಂಖ್ಯೆ: 6.6/ಎಸ್‌ಎಸ್‌ಸಿ/28/33 ದಿನಾಂಕ: 09.04.2003.
3. ಶ್ರೀ ವೆಂಕಟೇಶ್ವರ ಸೇವಾ ಸಮಿತಿ ದತ್ತಿ ಇವರ ಪತ್ರ ಸಂಖ್ಯೆ: ವಿಎಸ್‌ಎಸ್‌ಟಿ/ಜಿ.ವಿ.ಸೌ.ದ/61/02-03, ದಿನಾಂಕ: 26.12.2002.
4. ಜೈನಾಬಿಯಾ ಗ್ರಾಮೀಣ ದೊಡ್ಡ ಪ್ರಮಾಣದ ವಿಜ್ಞಾನ ಕೇಂದ್ರ ಇವರ ಮನವಿ ದಿನಾಂಕ: 15.03.2003.

**ಪ್ರಸ್ತಾವನೆ:**

ಬೀದರ್ ಜಿಲ್ಲೆ ಹುಮನಾಬಾದ್ ತಾಲ್ಲೂಕಿನ ಜಯಸಿಂಹ ನಗರದ ಶ್ರೀ ವೆಂಕಟೇಶ್ವರ ಸೇವಾ ಸಮಿತಿ ದತ್ತಿ ಹಾಗೂ ಕೋಲಾರ ಜಿಲ್ಲೆ ಗೌರಿಬಿದನೂರು ತಾಲ್ಲೂಕಿನ ಅಲಿಪುರದ ಜೈನಾಬಿಯಾ ಗ್ರಾಮೀಣ ವಿದ್ಯಾ ಸಂಸ್ಥೆಯ ಕಾರ್ಯದರ್ಶಿಗಳು ಗ್ರಾಮೀಣ ಜನತೆಯಲ್ಲಿ ವೈಜ್ಞಾನಿಕ ಮನೋಭಾವನೆಯ ಅಭಿರುಚಿಯನ್ನು ಬೆಳೆಸಲು ಹಾಗೂ ಶಾಲಾ ವಿದ್ಯಾರ್ಥಿಗಳಲ್ಲಿ ವಿಜ್ಞಾನ ಜನಪ್ರಿಯಗೊಳಿಸುವ ನಿಟ್ಟಿನಲ್ಲಿ ಕಾರ್ಯನಿರ್ವಹಿಸುತ್ತಿದ್ದು. ಈ ನಿಟ್ಟಿನಲ್ಲಿ ಸದರಿ ಸಂಸ್ಥೆಗಳನ್ನು ಗ್ರಾಮೀಣ ದೊಡ್ಡಪ್ರಮಾಣ ವಿಜ್ಞಾನ ಕೇಂದ್ರಗಳನ್ನಾಗಿ ಪರಿಗಣಿಸಿ ಸರ್ಕಾರದಿಂದ ಸದರಿ ಕಾರ್ಯಕ್ರಮಗಳಿಗೆ ಸಹಾಯಾನುದಾನವನ್ನು ನೀಡುವಂತೆ ಮೇಲೆ ಓದಲಾದ 3 ಮತ್ತು 4ರ ಮನವಿ ಪತ್ರದಲ್ಲಿ ಕೋರಿರುತ್ತಾರೆ. ಸದರಿ ಮನವಿಗಳನ್ನು ಪರಿಶೀಲಿಸಿ ಮತ್ತು ಎರಡು ಸಂಸ್ಥೆಗಳು ನಡೆಸುತ್ತಾ ಬಂದಿರುವ ಚಟುವಟಿಕೆಗಳನ್ನು ಗಣನೆಗೆ ತೆಗೆದುಕೊಂಡು ಈ ಎರಡು ಸಂಸ್ಥೆಗಳನ್ನು ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯಿಂದ ಈ ಮೊದಲು ಮಾನ್ಯತೆ ನೀಡಲಾದ ಇತರೆ 13 ದೊಡ್ಡ ಪ್ರಮಾಣದ ಗ್ರಾಮೀಣ ವಿಜ್ಞಾನ ಕೇಂದ್ರಗಳಂತೆ ಪರಿಗಣಿಸಿ ಎರಡು ಸಂಸ್ಥೆಗಳ ದೊಡ್ಡಪ್ರಮಾಣದ ವಿಜ್ಞಾನ ಕೇಂದ್ರಗಳನ್ನು ಮಂಜೂರು ಮಾಡಲು ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು ಮೇಲೆ ಓದಲಾದ 1 ಮತ್ತು 2ರ ಪತ್ರದಲ್ಲಿ ಶಿಫಾರಸು ಮಾಡಿರುತ್ತದೆ.

ಸದರಿ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ರಾವಿಪ 42 ವಿತ್ರಮ 2003, ಬೆಂಗಳೂರು, ದಿನಾಂಕ: 12ನೇ ಆಗಸ್ಟ್ 2003**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ, ಜನ ಸಾಮಾನ್ಯರಲ್ಲಿ ವೈಜ್ಞಾನಿಕ ಮನೋಭಾವನೆಯನ್ನು ಮೂಡಿಸಲು ಹಾಗೂ ಅಭಿವೃದ್ಧಿ ಕಾರ್ಯಗಳಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನವನ್ನು ಬಳಕೆ ಮಾಡಿ ರಾಜ್ಯದ ಪ್ರಗತಿಯನ್ನು ಮುನ್ನಡೆಸುವ ಬಗ್ಗೆ ಮುಖ್ಯವಾಗಿ ಗ್ರಾಮೀಣ ಜನರಲ್ಲಿ ಅರಿವುಂಟುಮಾಡಲು ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ಉದ್ದೇಶಿತ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸುತ್ತಿರುವ

1. ಶ್ರೀ ವೆಂಕಟೇಶ್ವರ ಸೇವಾ ಸಮಿತಿ ದತ್ತಿ, ಜಯಸಿಂಹ ನಗರ, ಹುಮನಾಬಾದ್ ತಾಲ್ಲೂಕು, ಬೀದರ್ ಜಿಲ್ಲೆ.
2. ಜೈನಾಬಿಯಾ ಗ್ರಾಮೀಣ ವಿದ್ಯಾ ಸಂಸ್ಥೆ, ಅಲಿಪುರ, ಗೌರಿಬಿದನೂರು ತಾಲ್ಲೂಕು, ಕೋಲಾರ ಜಿಲ್ಲೆ.

ಈ ಎರಡು ಸಂಸ್ಥೆಗಳನ್ನು ಈ ಕೆಳಕಂಡ ಷರತ್ತುಗಳನುಸಾರ ದೊಡ್ಡಪ್ರಮಾಣದ ಗ್ರಾಮೀಣ ವಿಜ್ಞಾನ ಕೇಂದ್ರಗಳನ್ನಾಗಿ ಪರಿಗಣಿಸಿದೆ.

1) ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತಿನವರ ಸಂಯೋಗದೊಂದಿಗೆ ಕಾರ್ಯಕ್ರಮಗಳನ್ನು ಕೈಗೊಳ್ಳುತ್ತಿರಬೇಕು ಮತ್ತು ಕೇಂದ್ರದ ನಿರ್ವಹಣೆಗಾಗಿ ಸಂಬಂಧಪಟ್ಟ ಜಿಲ್ಲಾಧಿಕಾರಿ/ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಹಾಗೂ ಜಿಲ್ಲಾ ಮಟ್ಟದ ಶಿಕ್ಷಣ ಇಲಾಖೆಯ ಅಧಿಕಾರಿಗಳಾದ ಜಿಲ್ಲಾ ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ಮತ್ತು ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತಿನ ಕಾರ್ಯಕಾರಿ ಸಮಿತಿಯ ಸ್ಥಳೀಯ ಸದಸ್ಯರನ್ನು ಒಳಗೊಂಡು ಕಾರ್ಯಕಾರಿ ಸಮಿತಿಯನ್ನು ರಚಿಸಬೇಕು.
2) ಸಂಸ್ಥೆಗಳು ನಡೆಸುವ ಕಾರ್ಯಚಟುವಟಿಕೆಗಳ ಬಗ್ಗೆ ಪ್ರತಿ ಮೂರು ತಿಂಗಳಿಗೊಮ್ಮೆ ವರದಿಯನ್ನು ಸರ್ಕಾರಕ್ಕೆ ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತಿನ ಮೂಲಕ ಸಲ್ಲಿಸುವುದು.
3) ಪ್ರತಿ ವರ್ಷ ಚಟುವಟಿಕೆಗಳ ಖರ್ಚು ವೆಚ್ಚಗಳ ಬಗ್ಗೆ ಅಂದಾಜು ಪಟ್ಟಿಯನ್ನು ಮತ್ತು ಖರ್ಚು ಮಾಡಲಾದ ಬಗ್ಗೆ ಸಂಸ್ಥೆಯವರಿಂದ ಆಡಿಟ್ ಮಾಡಿಸಿ ಉಪಯೋಗತಾ ಪ್ರಮಾಣ ಪತ್ರವನ್ನು ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತಿನ ಮೂಲಕ ಸರ್ಕಾರಕ್ಕೆ ಸಲ್ಲಿಸುವುದು.

4) ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು ಇತರೆ ದೊಡ್ಡ ಪ್ರಮಾಣದ ವಿಜ್ಞಾನ ಕೇಂದ್ರಗಳ ಮಾದರಿಯಲ್ಲಿ ಸ್ಥಳೀಯ ಜಿಲ್ಲಾಡಳಿತ ವತಿಯಿಂದ ಸೂಕ್ತ ಕಟ್ಟಡವನ್ನು ಕೇಂದ್ರಕ್ಕೆ ವಿಜ್ಞಾನ ಚಟುವಟಿಕೆಗಳಿಗಾಗಿ ಪಡೆಯುವಲ್ಲಿ ಸಂಸ್ಥೆಯು ಪ್ರಯತ್ನಿಸಬೇಕು ಹಾಗೂ

5) ವಿಜ್ಞಾನ ಮತ್ತು ತಂತ್ರಜ್ಞಾನವನ್ನು ಜನಪ್ರಿಯಗೊಳಿಸುವ ನಿಟ್ಟಿನಲ್ಲಿ, ಕ್ಷೇತ್ರದಲ್ಲಿನ ಸ್ಥಳೀಯ ಪರಿಣಿತರ ಉಪಯೋಗವನ್ನು ಪಡೆದುಕೊಳ್ಳಬೇಕು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್ ಬಿ. ಕೃಷ್ಣಪ್ಪನವರ್**

ಪಿ.ಆರ್. 1069 ಪೀಠಾಧಿಕಾರಿ,

ಯೋಜನೆ, ಸಾಂಖ್ಯಿಕ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

### ತಿದ್ದುಪಡಿ ಸಂಖ್ಯೆ: ಆಕುಕ 4 ಪಿಐಎಂ 2001, ಬೆಂಗಳೂರು, ದಿನಾಂಕ: 5ನೇ ಆಗಸ್ಟ್ 2003

ಸರ್ಕಾರಿ ಅಧಿಸೂಚನೆ ಸಂಖ್ಯೆ: ಆಕುಕ 4 ಪಿಐಎಂ 2001, ದಿನಾಂಕ: 2.1.2003 ರಲ್ಲಿ ಉತ್ತರ ಕನ್ನಡ ಜಿಲ್ಲೆ, ಕಾರವಾರ, ಇಲ್ಲಿಗೆ ಗುತ್ತಿಗೆ ಆಧಾರದ ಮೇಲೆ ಆಯುರ್ವೇದ ವೈದ್ಯರ ನೇಮಕಾತಿ ಆದೇಶದಲ್ಲಿ ಡಾ: ರೂಪ ಹೇಮಂತ್ ಭಟ್ ಎನ್ನುವ ಬದಲು "ಡಾ: ರೂಪಾ ಹೇಮಂತ್ ಭಟ್" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚೋಮಾನಾಯಕ್ ಜಿ.**

ಪಿ.ಆರ್. 1070 ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ವಿ.ಜಿ. ದಿವಾಕರ್, ಕೆ.ಎ.ಎಸ್. (ಹಿರಿಯ ಶ್ರೇಣಿ) ಅಧಿಕಾರಿ, ಇವರಿಗೆ ಪ್ರಥಮ ಸ್ಥಗಿತ ವೇತನ ಬಡ್ತಿ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಕಂಇ 227 ಎಎಸ್‌ಡಿ 2003, ದಿನಾಂಕ: 7.6.2003.

2. ಮಹಾಲೇಖಪಾಲರು (ಎ ಮತ್ತು ಇ) ಕರ್ನಾಟಕ, ಬೆಂಗಳೂರು, ಇವರ ಪತ್ರ ಸಂಖ್ಯೆ: ಜಿಇ1/ಆರ್2/Vol.714/2003-04/432-433, ದಿನಾಂಕ: 22.7.2003.

**ಪ್ರಸ್ತಾವನೆ:**

ಶ್ರೀ ವಿ.ಜಿ. ದಿವಾಕರ್, ಕೆ.ಎ.ಎಸ್ (ಹಿರಿಯ ಶ್ರೇಣಿ) ಅಧಿಕಾರಿ, ಇವರಿಗೆ ಮೇಲೆ ಕ್ರಮ ಸಂಖ್ಯೆ: 1ರ ಸರ್ಕಾರಿ ಆದೇಶದಲ್ಲಿ ಕಂದಾಯ ಇಲಾಖೆಯ ತಹಶೀಲ್ದಾರ್ ವೃಂದದಲ್ಲಿ ಕಾಲಮಿತಿ ವೇತನ ಬಡ್ತಿ ಮತ್ತು ವಿಶೇಷ ಸ್ವಯಂಚಾಲಿತ ವೇತನ ಬಡ್ತಿ ಮಂಜೂರಾತಿ ನೀಡಿದೆ. ಅದರಂತೆ ಅಧಿಕಾರಿಯ ವೇತನವನ್ನು ಪುನರ್ ನಿಗದಿಪಡಿಸಿರುವುದರ ಪರಿಣಾಮವಾಗಿ ಅಧಿಕಾರಿಯು ರೂ.2600-4575ರ ಶ್ರೇಣಿಯಲ್ಲಿ 1.6.95 ಕ್ಕೆ ಗರಿಷ್ಠ ಮಿತಿಯನ್ನು ತಲುಪಿರುವುದರಿಂದ ಅವರು ದಿನಾಂಕ: 1.6.1996ಕ್ಕೆ ಪ್ರಥಮ ಸ್ಥಗಿತ ವೇತನ ಬಡ್ತಿ ಪಡೆಯಲು ಅರ್ಹರಿರುವುದಾಗಿ ಮಹಾಲೇಖಪಾಲರು ಕ್ರಮ ಸಂಖ್ಯೆ: 2 ರಲ್ಲಿ ಓದಲಾದ ಪತ್ರದಲ್ಲಿ ತಿಳಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

### ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 216 ಆಸೇಇ 2003, ಬೆಂಗಳೂರು, ದಿನಾಂಕ: 20ನೇ ಆಗಸ್ಟ್ 2003

ಶ್ರೀ ವಿ.ಜಿ. ದಿವಾಕರ್, ಕೆ.ಎ.ಎಸ್. (ಹಿರಿಯ ಶ್ರೇಣಿ) ಅಧಿಕಾರಿ, ಇವರಿಗೆ ದಿನಾಂಕ: 1.6.1996 ರಿಂದ ಅನ್ವಯಿಸುವಂತೆ ವೇತನ ಶ್ರೇಣಿ ರೂ.2600-4575 ರಲ್ಲಿ ರೂ.125-00 ಗಳ ಪ್ರಥಮ ಸ್ಥಗಿತ ವೇತನ ಬಡ್ತಿ ಮಂಜೂರು ಮಾಡಿ ಅವರ ವೇತನವನ್ನು ರೂ.4575 + 125 ಎಂದು ನಿಗದಿಪಡಿಸಿ ಆದೇಶಿಸಿದೆ.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳಿಗೆ ಪ್ರದತ್ತವಾಗಿರುವ ಅಧಿಕಾರದ ಆದೇಶದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಸೆಲ್ವಕುಮಾರ್**

ಪಿ.ಆರ್. 1071 ಸರ್ಕಾರದ ಉಪ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು).

## ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ

### ತಿದ್ದುಪಡಿ ಸಂಖ್ಯೆ: ಕೃತೋಇ 126 ತೋಸೇಪ 2002, ಬೆಂಗಳೂರು, ದಿನಾಂಕ: 7ನೇ ಆಗಸ್ಟ್ 2003

ಸರ್ಕಾರದ ಆದೇಶ ಸಂಖ್ಯೆ: ಕೃತೋಇ 126 ತೋಸೇಪ 2002, ದಿನಾಂಕ: 22.2.2003 ರಂದು ಹೊರಡಿಸಲಾದ ಆದೇಶದಲ್ಲಿ ಶ್ರೀ ಕೆ. ಪರಮೇಶ್ವರನ್, ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು ಮತ್ತು ಶ್ರೀ ಹೆಚ್.ವಿ. ಗಂಗಪ್ಪ, ತೋಟಗಾರಿಕೆ ಸಹಾಯಕ ಇವರುಗಳು 1998-99ನೇ ಸಾಲಿನಲ್ಲಿ ಮಾಗಡಿ ತಾಲ್ಲೂಕಿನ ಹಾರೋಹಳ್ಳಿ ತೋಟಗಾರಿಕೆ ಕ್ಷೇತ್ರದಲ್ಲಿ ನಡೆಸಿರುವ ಅವ್ಯವಹಾರಗಳ ಬಗ್ಗೆ ವಿಚಾರಣೆಯನ್ನು ನಡೆಸಲು ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, ಮಾಗಡಿ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಿರುವುದನ್ನು ಪರಿಷ್ಕರಿಸಿ, ಇವರ ಬದಲಿಗೆ ಕೇಂದ್ರ ಕಛೇರಿ ಸಹಾಯಕರು, ತೋಟಗಾರಿಕೆ ಉಪ ನಿರ್ದೇಶಕರು (ಜಿ.ಪಂ.)

ಕಾರ್ಯಾಲಯ, ಬೆಂಗಳೂರು (ಗ್ರಾಮಾಂತರ) ಇವರನ್ನು ಮಂಡನಾಧಿಕಾರಿಯನ್ನಾಗಿ ಸದರಿ ಪ್ರಕರಣದಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ನೇಮಿಸಲಾಗಿದೆ ಎಂದು ತಿದ್ದಿಕೊಂಡು ಓದಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್. ಮಂಜುಳ ಗೀತ**
ಪಿ.ಆರ್. 1072 ಸರ್ಕಾರದ ಅಧೀನ ಕಾರ್ಯದರ್ಶಿ, ಕೃಷಿ ಮತ್ತು ತೋಟಗಾರಿಕೆ ಇಲಾಖೆ.

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

**ವಿಷಯ:** ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಮತ್ತು ಪ್ರಾಚ್ಯವಸ್ತು ಮತ್ತು ಸಂಗ್ರಾಹಾಲಯ ನಿರ್ದೇಶನಾಲಯ ಅಡಿಯಲ್ಲಿ ಮಾಸಿಕ ಅನುದಾನ ಪಡೆಯುತ್ತಿರುವ ಹಾಗೂ ಅನುದಾನ ಸಂಹಿತೆಗೆ ಒಳಪಟ್ಟಿರುವ ಸಂಸ್ಥೆಗಳಿಗೆ ವಾರ್ಷಿಕ ಅನುದಾನ ನೀಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಸಂಕಇ 56 ಸ್ವೀಮರ 2002, ದಿನಾಂಕ: 26.06.2003.
2. ಜಂಟಿ ನಿರ್ದೇಶಕರು ಹಾಗೂ ಸದಸ್ಯ ಕಾರ್ಯದರ್ಶಿ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಇವರ ಅರೆಸರ್ಕಾರಿ ಪತ್ರ ಸಂಖ್ಯೆ: ಕಸನಿ/ಅನುದಾನ ಸಂಹಿತೆ/03-04, ದಿನಾಂಕ: 15.07.2003.

**ಪ್ರಸ್ತಾವನೆ:**

ಉಲ್ಲೇಖ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕನ್ನಡ ಮತ್ತು ಮತ್ತು ಸಂಸ್ಕೃತಿ ನಿರ್ದೇಶನಾಲಯ ಮತ್ತು ಪ್ರಾಚ್ಯವಸ್ತು ಮತ್ತು ಸಂಗ್ರಾಹಾಲಯ ನಿರ್ದೇಶನಾಲಯದ ಅಡಿಯಲ್ಲಿ ವಾರ್ಷಿಕ ಅನುದಾನ ಪಡೆಯುತ್ತಿರುವ ಹಾಗೂ ಅನುದಾನ ಸಂಹಿತೆಗೆ ಒಳಪಟ್ಟಿರುವ ಸಂಸ್ಥೆಗಳಿಗೆ ವಾರ್ಷಿಕ ಅನುದಾನ ನೀಡುವ ಬಗ್ಗೆ ಪುನರ್ ಪರಿಶೀಲನಾ ತಜ್ಞರ ಸಮಿತಿಯನ್ನು ನೇಮಿಸಿ ಈ ಸಮಿತಿಯು ತನ್ನ ಶಿಫಾರಸ್ಸಿನೊಂದಿಗೆ ವರದಿಯನ್ನು 2003ರ ಜುಲೈ ತಿಂಗಳ ಅಂತ್ಯದೊಳಗಾಗಿ ಸಲ್ಲಿಸಲು ಆದೇಶಿಸಲಾಗಿತ್ತು.

ಉಲ್ಲೇಖ (2) ರಲ್ಲಿ ಓದಲಾದ ಪತ್ರದಲ್ಲಿ ಜಂಟಿ ನಿರ್ದೇಶಕರು ಹಾಗೂ ಅನುದಾನ ಪಡೆಯುತ್ತಿರುವ - ಅನುದಾನ ಸಂಹಿತೆಗೆ ಒಳಪಟ್ಟಿರುವ ಸಂಸ್ಥೆಗಳಿಗೆ ವಾರ್ಷಿಕ ಅನುದಾನ ನೀಡುವ ಬಗ್ಗೆ ಪುನರ್ ಪರಿಶೀಲನಾ ಸಮಿತಿಯ ಸದಸ್ಯ ಕಾರ್ಯದರ್ಶಿ ರವರು ಜುಲೈ 2003ರ ಅಂತ್ಯದೊಳಗೆ ವರದಿ ಸಲ್ಲಿಸಲು ಕಷ್ಟಸಾಧ್ಯವಿರುವುದರಿಂದ ಇನ್ನೂ ಹೆಚ್ಚಿಗೆ 60 ದಿನಗಳ ಕಾಲಾವಕಾಶವನ್ನು ನೀಡಲು ಕೋರಿರುತ್ತಾರೆ.

ಸದಸ್ಯ ಕಾರ್ಯದರ್ಶಿಗಳ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ:

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 56 ಸ್ವೀಮರ 2002, ಬೆಂಗಳೂರು, ದಿನಾಂಕ: 20ನೇ ಆಗಸ್ಟ್ 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಮತ್ತು ಪ್ರಾಚ್ಯವಸ್ತು ಮತ್ತು ಸಂಗ್ರಾಹಾಲಯ ನಿರ್ದೇಶನಾಲಯ ಅಡಿಯಲ್ಲಿ ಮಾಸಿಕ ಅನುದಾನ ಪಡೆಯುತ್ತಿರುವ ಹಾಗೂ ಅನುದಾನ ಸಂಹಿತೆಗೆ ಒಳಪಟ್ಟಿರುವ ಸಂಸ್ಥೆಗಳಿಗೆ ವಾರ್ಷಿಕ ಅನುದಾನ ನೀಡುವ ಬಗ್ಗೆ ಪುನರ್ ಪರಿಶೀಲನಾ ತಜ್ಞರ ಸಮಿತಿ ವರದಿಯನ್ನು ಜುಲೈ 2003ರ ಅಂತ್ಯದೊಳಗೆ ಸಲ್ಲಿಸಲು ನೀಡಿರುವ ಕಾಲಾವಕಾಶವನ್ನು ವಿಸ್ತರಿಸಿ 40 ದಿನಗಳೊಳಗೆ ಸಮಿತಿಯು ತನ್ನ ವರದಿಯನ್ನು ಶಿಫಾರಸ್ಸಿನೊಂದಿಗೆ ಸಲ್ಲಿಸತಕ್ಕದ್ದೆಂದು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ವಿಶಾಲಾಕ್ಷಮ್ಮ**
ಪಿ.ಆರ್. 1073 ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ಶಿಕ್ಷಣ ಇಲಾಖೆಯ ಮೇಲ್ಮನವಿ ಶಾಖೆಯ ಹುದ್ದೆಗಳನ್ನು ರದ್ದುಪಡಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 42 ಸಸಿವಿ 98, ದಿನಾಂಕ: 23.2.1999.
2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 35 ಸಸಿವಿ 2000, ದಿನಾಂಕ: 24.10.2000.
3. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 23 ಸಸಿವಿ 2001, ದಿನಾಂಕ: 28.6.2001.
4. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 32 ಸಸಿವಿ 2002, ದಿನಾಂಕ: 17.6.2002.
5. ಅಧೀನ ಕಾರ್ಯದರ್ಶಿಗಳು, ಶಿಕ್ಷಣ ಇಲಾಖೆ (ವಿ.ವಿ. ಮತ್ತು ಸಾಮಾನ್ಯ) ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ: ಇಡಿ 31 ವಿವಿಧ 2003, ದಿನಾಂಕ: 22.7.2003.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾಗಿರುವ ದಿನಾಂಕ: 23.2.1999ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ಶಿಕ್ಷಣ ಇಲಾಖೆಯಲ್ಲಿ ಸ್ವೀಕೃತವಾಗುತ್ತಿರುವ ಮೇಲ್ಮನವಿಗಳನ್ನು ಪರಿಶೀಲಿಸುವ ಸಲುವಾಗಿ ಒಂದು ಮೇಲ್ಮನವಿ ಶಾಖೆಯನ್ನು ಈ ಕೆಳಕಂಡ ಹುದ್ದೆಗಳೊಂದಿಗೆ ಒಂದು ವರ್ಷದ ಅವಧಿಗೆ ಸೃಜಿಸಲಾಗಿದ್ದಿತು.

| | | |
|---|---|---|
| ಅ. | ಶಾಖಾಧಿಕಾರಿ (ಕಾನೂನು ಪದವಿ ಹೊಂದಿರುವ : ಕಾನೂನು ಹಿನ್ನೆಲೆ ಉಳ್ಳ ಅಧಿಕಾರಿ) | 1 ಹುದ್ದೆ |
| ಆ. | ಹಿರಿಯ ಸಹಾಯಕರು | 1 ಹುದ್ದೆ |
| ಇ. | ಸಹಾಯಕರು | 1 ಹುದ್ದೆ |

| | | |
|---|---|---|
| ಈ. | ಶೀಘ್ರಲಿಪಿಗಾರರು | 1 ಹುದ್ದೆ |
| ಉ. | ಬೆರಳಚ್ಚುಗಾರರು | 1 ಹುದ್ದೆ |
| ಊ. | ಕಿರಿಯ ಸಹಾಯಕರು | 1 ಹುದ್ದೆ |

ನಂತರ ಕ್ರಮ ಸಂಖ್ಯೆ: (2) ಮತ್ತು (3) ರಲ್ಲಿ ಓದಲಾಗಿರುವ ಸರ್ಕಾರಿ ಆದೇಶಗಳನ್ವಯ ಈ ಶಾಖೆಯನ್ನು ಕಾಲಕಾಲಕ್ಕೆ ವಿಸ್ತರಿಸಿಕೊಂಡು ಬರಲಾಗಿರುತ್ತದೆ. ಹಾಗೂ ಕ್ರಮ ಸಂಖ್ಯೆ: (4) ರಲ್ಲಿ ಓದಲಾಗಿರುವ ದಿನಾಂಕ: 17.6.2002ರ ಆದೇಶದಲ್ಲಿ ಈ ಶಾಖೆಯ ಶಾಖಾಧಿಕಾರಿ : ಹಿರಿಯ ಸಹಾಯಕ : ಶೀಘ್ರಲಿಪಿಗಾರ ಹಾಗೂ ಕಿರಿಯ ಸಹಾಯಕ ಹುದ್ದೆಗಳನ್ನು ಮಾತ್ರ ದಿನಾಂಕ: 22.2.2003 ರವರೆಗೆ ಮುಂದುವರೆಸಿದ್ದು ಇನ್ನುಳಿದ ಸಹಾಯಕ ಹಾಗೂ ಬೆರಳಚ್ಚುಗಾರ ವೃಂದದ ತಲಾ ಒಂದೊಂದು ಹುದ್ದೆಗಳನ್ನು ದಿನಾಂಕ: 1.7.2002 ರಿಂದ ರದ್ದು ಪಡಿಸಲಾಗಿರುತ್ತದೆ.

ಪ್ರಸ್ತುತ ಅಧೀನ ಕಾರ್ಯದರ್ಶಿಗಳು, ಶಿಕ್ಷಣ ಇಲಾಖೆ (ವಿಶ್ವ ವಿದ್ಯಾಲಯ ಹಾಗೂ ಸಾಮಾನ್ಯ) ಇವರು ಮೇಲೆ ಕ್ರಮ ಸಂಖ್ಯೆ (5) ರಲ್ಲಿ ಓದಲಾದ ದಿನಾಂಕ: 22.7.2003ರ ಅನಧಿಕೃತ ಟಿಪ್ಪಣಿಯಲ್ಲಿ ಮೇಲ್ಮನವಿ ಶಾಖೆಯ ಹುದ್ದೆಗಳನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯಿಂದ ಮುಂದುವರಿಸಿರುವುದಿಲ್ಲ ಹಾಗೂ ಯಾವುದೇ ಹುದ್ದೆಗಳನ್ನು ಭರ್ತಿ ಮಾಡಿರುವುದಿಲ್ಲ. ಈ ಕಾರಣದಿಂದಾಗಿ ಪ್ರಸ್ತುತ ಮೇಲ್ಮನವಿ ಶಾಖೆಯ ಶಾಖಾಧಿಕಾರಿ : ಹಿರಿಯ ಸಹಾಯಕ : ಶೀಘ್ರಲಿಪಿಗಾರ ಹಾಗೂ ಕಿರಿಯ ಸಹಾಯಕರ ಹುದ್ದೆಗಳನ್ನೂ ಸಹ ರದ್ದು ಪಡಿಸುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದ್ದು ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 71 ಸಸಿವಿ 2003, ಬೆಂಗಳೂರು, ದಿನಾಂಕ: 21ನೇ ಆಗಸ್ಟ್ 2003**

ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ಶಿಕ್ಷಣ ಇಲಾಖೆಯ ಮೇಲ್ಮನವಿ ಶಾಖೆಯ ಈ ಕೆಳಕಂಡ 4 (ನಾಲ್ಕು) ಹುದ್ದೆಗಳನ್ನು ದಿನಾಂಕ: 22.2.2003 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ರದ್ದು ಪಡಿಸಲಾಗಿದೆ.

| | | |
|---|---|---|
| ಅ. | ಶಾಖಾಧಿಕಾರಿ (ಕಾನೂನು ಪದವಿ ಹೊಂದಿರುವ : ಕಾನೂನು ಹಿನ್ನೆಲೆ ಉಳ್ಳ ಅಧಿಕಾರಿ) | 1 ಹುದ್ದೆ |
| ಆ. | ಹಿರಿಯ ಸಹಾಯಕರು | 1 ಹುದ್ದೆ |
| ಇ. | ಶೀಘ್ರಲಿಪಿಗಾರರು | 1 ಹುದ್ದೆ |
| ಈ. | ಕಿರಿಯ ಸಹಾಯಕರು | 1 ಹುದ್ದೆ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 1074

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

## ವಸತಿ ಸಚಿವಾಲಯ

**ವಿಷಯ:** ಆಶ್ರಯ ಯೋಜನೆಯಡಿ ರಾಜ್ಯದ ಹಿರಿಯ ನಾಗರೀಕರಿಗೆ ಮೀಸಲಾತಿ ನಿಗದಿಪಡಿಸುವ ಬಗ್ಗೆ.

**ಓದಲಾಗಿದೆ:**
1. ಅರೆ ಸರ್ಕಾರಿ ಪತ್ರ ಸಂಖ್ಯೆ: ಮಮಇ/314/ಎಸ್‌ಜೆಡಿ/2002, ದಿನಾಕ: 18.07.2003 ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.
2. ಸರ್ಕಾರಿ ಆದೇಶ ಸಂಖ್ಯೆ: ಹೆಚ್‌ಯುಡಿ 1 ಹೆಚ್‌ಎಹೆಚ್ 95, ಬೆಂಗಳೂರು, ದಿನಾಂಕ: 04.08.1995.
3. ಸರ್ಕಾರಿ ಆದೇಶ ಸಂಖ್ಯೆ: ವಇ 103 ಹೆಚ್‌ಎಎಸ್ 99, ಬೆಂಗಳೂರು, ದಿನಾಂಕ: 03.08.2000.
4. ಸರ್ಕಾರಿ ಆದೇಶ ಸಂಖ್ಯೆ: ವಇ 206 ಹೆಚ್‌ಎಹೆಚ್ 2001, ಬೆಂಗಳೂರು, ದಿನಾಂಕ: 19.08.2002.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ: (1) ರಲ್ಲಿನ ಅರೆ ಸರ್ಕಾರಿ ಪತ್ರದಲ್ಲಿ ರಾಜ್ಯದ ಹಿರಿಯ ನಾಗರೀಕರಿಗಾಗಿ ಕೆಲವು ಸೌಲಭ್ಯಗಳನ್ನು ಕಲ್ಪಿಸುವ ಉದ್ದೇಶದಿಂದ ಕರ್ನಾಟಕ ರಾಜ್ಯ ಕಾರ್ಯನೀತಿಯನ್ನು ರೂಪಿಸಲು ತೀರ್ಮಾನಿಸಲಾಗಿದ್ದು, ಅದರಂತೆ ಶೇ.2 ರಷ್ಟು ಆಶ್ರಯ ಮನೆಗಳನ್ನು ಹಿರಿಯ ನಾಗರೀಕರಿಗಾಗಿ ಮೀಸಲಿಡುವ ಆದೇಶವನ್ನು ಹೊರಡಿಸುವಂತೆ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಪ್ರಧಾನ ಕಾರ್ಯದರ್ಶಿಗಳು ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮಸಂಖ್ಯೆ: (2) ರಲ್ಲಿನ ಸರ್ಕಾರಿ ಆದೇಶದನ್ವಯ ಆಶ್ರಯ ಯೋಜನೆಯಡಿ ವಾರ್ಷಿಕ ವರಮಾನವು ರೂ.11,800/- ಕ್ಕೆ ಮೀರದಂತೆ ಇರುವ ಫಲಾನುಭವಿಗಳಿಗೆ ನಿವೇಶನ / ಮನೆಗಳನ್ನು ಹಂಚಲಾಗುವುದು. ಈ ರೀತಿ ಹಂಚುವಿಕೆಯಲ್ಲಿ ಪರಿಶಿಷ್ಟ ಜಾತಿಯವರಿಗೆ ಶೇ.45 ರಷ್ಟು ಮತ್ತು ಪರಿಶಿಷ್ಟ ಪಂಗಡದವರಿಗೆ ಶೇ.5 ರಷ್ಟನ್ನು ಮೀಸಲಿಡಲು ಹಾಗೂ ಉಳಿದ ಶೇ.50 ರಷ್ಟರಲ್ಲಿ ಇತರೆ ವರ್ಗದವರಿಗೆ ನೀಡಲಾಗುವುದು.

ಮೇಲೆ ಓದಲಾದ ಕ್ರಮಸಂಖ್ಯೆ: (3) ರಲ್ಲಿನ ಸರ್ಕಾರಿ ಆದೇಶ ದಿನಾಂಕ: 03.08.2000 ರಲ್ಲಿ ಮಾಜಿ ಸೈನಿಕರಿಗೆ / ಸೈನಿಕರ ವಿಧವೆಯರಿಗಾಗಿ ಆಶ್ರಯ ಯೋಜನೆಯಡಿ ನಿವೇಶನಗಳನ್ನು ನೀಡಲು ಶೇ.1 ರಷ್ಟು ಮೀಸಲಾತಿಯನ್ನು ವರಮಾನದ ಮಿತಿಯನ್ನು ಸಡಿಲಿಸಿ ಒದಗಿಸಲು ಆದೇಶಿಸಿದೆ.

ಮೇಲೆ ಓದಲಾದ ಕ್ರಮಸಂಖ್ಯೆ: (4) ರಲ್ಲಿನ ಆದೇಶದಲ್ಲಿ ಶೇ.5 ರಷ್ಟು ಮೀಸಲಾತಿಯನ್ನು ವಸತಿರಹಿತ ಅಂಗವಿಕಲರಿಗೆ ಮೀಸಲಾತಿ ಒದಗಿಸಲು ಆದೇಶಿಸಿದೆ. ಈಗ ಬಡತನ ರೇಖೆಗಿಂತ ಕೆಳಗಿರುವ ವಸತಿ ರಹಿತ ಹಿರಿಯ ನಾಗರೀಕರಿಗೆ ವಸತಿ ಹಂಚಿಕೆಯಲ್ಲಿ ಮೀಸಲಾತಿ ನಿಗದಿಪಡಿಸುವ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಇ 25 ಹೆಚ್‌ಎಎಂ 2003, ಬೆಂಗಳೂರು, ದಿನಾಂಕ: 14ನೇ ಆಗಸ್ಟ್ 2003**

ಮೇಲ್ಕಂಡ ಸಂದರ್ಭದಲ್ಲಿ ಸರ್ಕಾರವು ರಾಜ್ಯದ ಹಿರಿಯ ನಾಗರೀಕರಿಗೆ ಆಶ್ರಯ ಯೋಜನೆಯಡಿ ಮನೆಗಳನ್ನು ನೀಡಲು ಶೇ.2 ರಷ್ಟು ಮೀಸಲಾತಿಯನ್ನು ವರಮಾನದ ಮಿತಿಯನ್ನು ಸಡಿಲಿಸಿ ಒದಗಿಸಲಾಗಿದೆಯೆಂದು ಆದೇಶಿಸಲಾಗಿದೆ.

ಮುಂದುವರೆದು ಯಾವುದೇ ವರ್ಷದಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಹಿರಿಯ ನಾಗರೀಕರು ಲಭ್ಯವಿಲ್ಲದಿದ್ದಲ್ಲಿ ಉಪಯೋಗಿಸಿ ಕೊಳ್ಳಲಾಗದ ಮೀಸಲಾತಿಯನ್ನು ಸಾಮಾನ್ಯ ವರ್ಗಕ್ಕೆ ವರ್ಗಾಯಿಸಲು ಸರ್ಕಾರವು ಈ ಮೂಲಕ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಇಂದುಮತಿ**

ಪಿ.ಆರ್. 1075 ಪೀಠಾಧಿಕಾರಿ-2, ವಸತಿ ಇಲಾಖೆ.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಶ್ರೀ ಎ. ಮಹದೇವ, ನಿವೃತ್ತ ಕೆ.ಎ.ಎಸ್. ಅಧಿಕಾರಿ ಇವರ ವಿರುದ್ಧ ಇಲಾಖಾ ವಿಚಾರಣೆ - ಆರೋಪ ಮುಕ್ತರನ್ನಾಗಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** 1. ನೋಟೀಸ್ ಸಂಖ್ಯೆ: ಸಿಆಸುಇ 10 ಎಸ್‌ಇಎನ್ 95, ದಿನಾಂಕ: 13.7.99.

2. ಶ್ರೀ ಎ. ಮಹದೇವ, ನಿವೃತ್ತ ಕೆ.ಎ.ಎಸ್. ಅಧಿಕಾರಿ ಅವರ ದಿನಾಂಕ: 11.01.2001ರ ಉತ್ತರ.

**ಪ್ರಸ್ತಾವನೆ:**

ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದಲ್ಲಿ ದಿನಾಂಕ: 17.7.91 ರಿಂದ 5.8.92ರ ವರೆಗೆ ವಿಶೇಷ ಭೂ ಸ್ವಾಧೀನಾಧಿಕಾರಿಯಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ, ವಿಜಯನಗರ 4ನೇ ಹಂತ 1,2 ಮತ್ತು 3ನೇ ಫೇಸ್ ಹಾಗೂ ದಟ್ಟಗಳ್ಳಿ 3ನೇ ಹಂತ ಬಡಾವಣೆಯನ್ನು ನಿರ್ಮಿಸಲು ಜಮೀನು ಭೂ ಸ್ವಾಧೀನಪಡಿಸುವ ಸಂದರ್ಭದಲ್ಲಿ 1894ರ ಭೂ ಸ್ವಾಧೀನ ಕಾಯ್ದೆ ಅಧಿನಿಯಮ 11 ಹಾಗೂ 1987ರ ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಕಾಯ್ದೆ ಸೆಕ್ಷನ್ 19(1)ರ ಪ್ರಕ್ರಿಯೆಯನ್ನು ಪೂರ್ಣಗೊಳಿಸದೆ ಹಾಗೂ ಸರ್ಕಾರದಿಂದ ಅವಾರ್ಡ್ ಅನುಮೋದನೆಯಾಗದೆ ಇದ್ದರೂ ಸಹ ನಿಯಮವನ್ನು ಉಲ್ಲಂಘಿಸಿ ಅಲಾಯಿದ ತಃಖ್ತೆಯಲ್ಲಿ ನಮೂದಿಸಿರುವ ಪ್ರಕರಣಗಳಲ್ಲಿ ಭೂ ಪರಿಹಾರ ಪಾವತಿಸಲು ಕ್ರಮ ವಹಿಸಿ 1894ರ ಭೂ ಸ್ವಾಧೀನ ಕಾಯ್ದೆಯಲ್ಲಿರುವ ಕಾನೂನನ್ನು ಸರಿಯಾಗಿ ಜಾರಿಗೊಳಿಸದೇ ಭೂ ಸ್ವಾಧೀನ ಪ್ರಕ್ರಿಯೆ “ಅಸಿಂಧು” ಎಂದು ಉಚ್ಚ ನ್ಯಾಯಾಲಯವು ತೀರ್ಮಾನಿಸಿ ಅವರೇ ಜವಾಬ್ದಾರರಾಗಿರುತ್ತಾರೆ. ಭೂ ಸ್ವಾಧೀನ ಪ್ರಕರಣಗಳಲ್ಲಿ ಕಾನೂನು ಬಾಹಿರವಾಗಿ ಪರಿಹಾರಧನ ಪಾವತಿ ಮಾಡಿದ ಹಾಗೂ ಪ್ರಾಧಿಕಾರವನ್ನು ಆರ್ಥಿಕವಾಗಿ ಮುನ್ನಡೆಸಲು ವಿಫಲರಾದ ಆರೋಪಗಳಿಗಾಗಿ ಶ್ರೀ ಎ. ಮಹಾದೇವ ನಿವೃತ್ತ ಕೆಎಎಸ್ ಅಧಿಕಾರಿ ಅವರಿಗೆ ಮೇಲೆ (1) ರಲ್ಲಿ ಓದಲಾದ ದಿನಾಂಕ: 13.7.99ರ ನೋಟೀಸ್ ನೀಡಿ ಸಮಜಾಯಿಷಿಯನ್ನು ಕೇಳುವುದರ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು.

ಈ ನೋಟೀಸ್‌ಗೆ ಮೇಲೆ (2) ರಲ್ಲಿ ಓದಲಾದ ದಿನಾಂಕ: 11.1.2001ರ ರಕ್ಷಣಾ ಹೇಳಿಕೆ ಸಲ್ಲಿಸಿ, ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರದ ಕಾಯ್ದೆ 1987 ರಲ್ಲಿ ಜಾರಿಗೆ ಬಂದಿದ್ದು, ಸದರೀ ಕಾಯ್ದೆ ಕಲಂ 35 ರಲ್ಲಿ ಪರಸ್ಪರ ಒಪ್ಪಂದದ ಮೇರೆಗೆ ಜಮೀನು ಪಡೆಯಲು ಪ್ರಾಧಿಕಾರಕ್ಕೆ ಅವಕಾಶ ಮಾಡಿಕೊಡಲಾಗಿದೆ. ಪರಸ್ಪರ ಒಪ್ಪಂದದ ಸಂದರ್ಭದಲ್ಲಿ ಜಮೀನು ಪಡೆಯಲಾಗದ ಸಂದರ್ಭದಲ್ಲಿ ಕಾಯಿದೆ ಕಲಂ 36ರ ಮೇರೆಗೆ ಭೂ ಸ್ವಾಧೀನ ಕಾಯಿದೆ 1894ರ ಮೇರೆಗೆ ಭೂ ಸ್ವಾಧೀನ ನಡವಳಿಕೆ ನಡೆಸುವ ಅವಕಾಶ ಮಾಡಿರುತ್ತಾರೆ. ಈ ವೇಳೆಯಲ್ಲಿ ಕಲಂ 35ನ್ನು ಹೇಗೆ ಬಳಸಬೇಕು ಮತ್ತು ಯಾವ ಸಂದರ್ಭಗಳಲ್ಲಿ ಈ ನಿಯಮಗಳಡಿಯಲ್ಲಿ ಜಮೀನು ಪಡೆಯಬೇಕೆಂಬ ಯಾವುದೇ ನಿರ್ಬಂಧಗಳು ಕಾಯಿದೆ ಅಥವಾ ಸರ್ಕಾರದ ಆದೇಶಗಳಲ್ಲಿ ಇರಲಿಲ್ಲ. ಉಚ್ಚ ನ್ಯಾಯಾಲಯವು ತನ್ನ ಆದೇಶದಲ್ಲಿ ಪ್ರಾಧಿಕಾರವು ಜಮೀನನ್ನು ಪರಸ್ಪರ ಒಪ್ಪಂದದಲ್ಲಿ ಪಡೆದ ರೀತಿ ಸರಿಯಲ್ಲವೆಂದು ಮಾತ್ರ ಅಭಿಪ್ರಾಯಪಟ್ಟಿದೆ. ಮೂಡಾದಿಂದ ನಿವೇಶನ ಹಂಚಿಕೆ ಬಗ್ಗೆ ಅರ್ಜಿ ಕರೆದಿರುವ ದಿನಾಂಕ: 12.9.92ರ ಡೆಕನ್ ಹೆರಾಲ್ಡ್ ಪತ್ರಿಕೆಯಲ್ಲಿ ಪ್ರಕಟವಾದ ಪ್ರಕಟಣೆಯನ್ನು ಭೂ ಸ್ವಾಧೀನ ಪ್ರಕ್ರಿಯೆಯು ಕ್ರಮಬದ್ಧವಾಗಿ ಆಗದಿರುವ ಹಿನ್ನೆಲೆಯಲ್ಲಿ ಉಚ್ಛ ನ್ಯಾಯಾಲಯವು ಸದರಿ ಪ್ರಕಟಣೆಯನ್ನು ಅಸಿಂಧುಗೊಳಿಸಿದೆ. ಭೂ ಸ್ವಾಧೀನ ನಂತರದ ಅಭಿವೃದ್ಧಿ ಕಾರ್ಯಕ್ರಮಗಳ ಅನುಷ್ಠಾನದ ಬಗ್ಗೆ ಉಚ್ಛ ನ್ಯಾಯಾಲಯದ ತೀರ್ಪಿನಲ್ಲಿ ವ್ಯಾಪಕವಾಗಿ ಚರ್ಚಿಸಲಾಗಿದೆ. ಭೂ ಸ್ವಾಧೀನ ಪ್ರಕ್ರಿಯೆಯನ್ನು ಕಲಂ 17(1)ರ ರೀತ್ಯಾ ಹೊರಡಿಸಿದ ಅಧಿಸೂಚನೆಯನ್ನು ಉಚ್ಛನ್ಯಾಯಾಲಯವು ಅಸಿಂಧುಗೊಳಿಸಿರುವುದಿಲ್ಲ. ಪ್ರಾಧಿಕಾರದಲ್ಲಿ ಭೂ ಸ್ವಾಧೀನ ಅಧಿಕಾರಿಯು ಅಧ್ಯಕ್ಷರಿಗೆ ಅಧೀನವಾಗಿದ್ದು ಯಾವುದೇ ಸ್ವತಂತ್ರ ತೀರ್ಮಾನ ತೆಗೆದುಕೊಳ್ಳುವಂತಿಲ್ಲ. ಉಚ್ಛನ್ಯಾಯಾಲಯ ನೀಡಿದ ತೀರ್ಪಿನ ಪ್ರಕಾರ ವಿಚಾರಣಾ ಆಯೋಗ ರಚನೆಯಾಗಿರುವುದಿಲ್ಲ. ಜಮೀನು ಅಭಿವೃದ್ಧಿಪಡಿಸಿ ಬಡಾವಣೆ ನಿರ್ಮಿಸಿ ಪ್ರಾಥಮಿಕ ಸೌಲಭ್ಯವನ್ನು ಕಲ್ಪಿಸಿ ನಿವೇಶನ ರಹಿತರಿಗೆ ನ್ಯಾಯಾಲಯದ ಅನುಮತಿ ಪಡೆದು ಪ್ರಾಧಿಕಾರದಿಂದ ನಿವೇಶನಗಳನ್ನು ವಿತರಿಸಲಾಗಿದೆ. ಹೀಗಾಗಿ ತಮ್ಮ ಉತ್ತರವನ್ನು ಒಪ್ಪಿಕೊಂಡು ಆರೋಪ ಮುಕ್ತರನ್ನಾಗಿಸಲು ಕೋರಿದ್ದಾರೆ. ನಿವೃತ್ತ ಅಧಿಕಾರಿಯ ಉತ್ತರವನ್ನು ಪರಿಶೀಲಿಸಿದ ಸರ್ಕಾರವು ಅದನ್ನು ಒಪ್ಪಿಕೊಂಡು ಪ್ರಕರಣವನ್ನು ಮುಕ್ತಾಯಗೊಳಿಸಲು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಕ್ರಮಾಂಕ: ಸಿಆಸುಇ 10 ಎಸ್‌ಇಎನ್ 95, ಬೆಂಗಳೂರು, ದಿನಾಂಕ: 20ನೇ ಆಗಸ್ಟ್ 2003**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಸರ್ಕಾರವು ಶ್ರೀ ಎ. ಮಹದೇವ, ನಿವೃತ್ತ ಕೆಎಎಸ್ ಅಧಿಕಾರಿ ಅವರನ್ನು ದಿನಾಂಕ: 13.7.99ರ ನೋಟೀಸ್‌ನಲ್ಲಿ ಮಾಡಿದ ಆರೋಪಗಳಿಂದ ಮುಕ್ತರನ್ನಾಗಿಸುತ್ತದೆ.

ಈ ವಿಚಾರಣೆ ನಡೆಯದಿದ್ದಲ್ಲಿ ಅವರು ಯಾವ ಸೌಲಭ್ಯಗಳನ್ನು ಪಡೆಯುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 1078 ಸರ್ಕಾರದ ಅಧೀನ ಕಾರ್ಯದರ್ಶಿ, ಸಿ.ಆ.ಸು. ಇಲಾಖೆ (ಸೇವೆಗಳು-3).